Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ಆರೋಹಣ ಸಾಧನ

ಕಳಿಸಿದವರು:
ಎಚ್. ಎಸ್. ಶ್ರೀನಿವಾಸ ಶೆಟ್ಟಿ

## ಈ ಸಂಚಿಕೆಯಲ್ಲಿ



ಅಲ್ಲದೆ ಟೈಪು ಚಿತ್ರ, ಫೋಟೋ ಶೀರ್ಷಿಕೆಯ ಸ್ಪರ್ಧೆ ಇತ್ಯಾದಿ.

## ಅದು ಮಧುರವಾದದ್ದು ...

ಎಲ್ಲಾ ಕಾಲಗಳಿಗೂ ಒಳ್ಳೆಯ ರುಚಿಕರವಾದ ಬಿಸ್ಕಟ್ಟುಗಳು. ಹಾಲಿನಿಂದ ಮತ್ತು ಗ್ಲೂಕೋಸಿನಿಂದ ತಯಾರಾಗಿ ಬೆಲೆಯುಳ್ಳ ವಿಟಮಿನ್ನುಗಳಿಂದ ತುಂಬಿವೆ.




ಜೆ. ಬಿ. ಮಂಘಾರಾಮ್ & ಕೋ., ಗ್ವಾಲಿಯರ್

ಬೊಂಬಾಯಿ ಏಜೆಂಟರು:
ನೇಷನಲ್ ಫುಡ್ ಏಜನ್ಸೀಸ್, 315, ನ್ಯೂ ಚರ್ನೀ ರೋಡ್



**ನರಿಷಿಂಗ್ ಬಿಸ್ಕಟ್ಟುಗಳು**

---

# ಶಾರದ ಇಂಕ್

ರಿಜಿಷ್ಟರ್ಡ್

ಫೌಂಟನ್ ಪೆನ್ನುಗಳಿಗೆ ಉತ್ತಮವಾದ ಮಸಿ




## ಕೆ. ವಿ. ಅಂಡ್ ಸನ್ಸ್, ಬಳ್ಳಾರಿ.

---



## ಡೋಂಗರೇ ಬಾಲಾಮೃತ

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್—26.







MORTON
SWEETS




MORTON

ಹೆಸರು ಗಳಿಸಿದ ಚಂದಮಾಮ ಬಳಗದಲ್ಲಿ

ಇನ್ನೊಂದು ಭಾಷೆ

# ಚಂದೋಮಾಮ

## (ಗುಜರಾತೀ)

ಹೊರಬೀಳಲಿರುವುದೆಂದು ಪ್ರಕಟಿಸಲು

ಕುತೂಹಲ ಪಡುತ್ತೇವೆ.



ವಾರ್ಷಿಕ ಚಂದಾ .... ರೂ. **4-8-0**

ಬಿಡಿ ಸಂಚಿಕೆ .... ,, **0-6-0**



ಏಜನ್ಸೀ ಷರತುಗಳಿಗೆ ಬರೆಯಿರಿ



ಚಂದಮಾಮ ಪಬ್ಲಿಕೇಷನ್ಸ್

ವಡಪಳನಿ :: ಮದರಾಸು - 26.

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

ಜನವರಿಯಿಂದ ಕಾಣುವ 'ಚಂದಮಾಮ'ನ ಹಿರಿಮೆಯನ್ನು ಮೆಚ್ಚಿ ಅಸಂಖ್ಯ ಕಾಗದಗಳು ಬಂದಿವೆ. ಅವರಿಗೆಲ್ಲಾ ನಮ್ಮ ಹಾರ್ದಿಕ ಅಭಿವಂದನೆಗಳನ್ನು ಈ ಮೂಲಕವಾಗಿ ತಿಳಿಸುತ್ತೇವೆ. ಫೆಬ್ರವರಿ ಸಂಚಿಕೆಯಿಂದ ಪ್ರಾರಂಭವಾದ ನೂತನ ರೀತಿಯ ಧಾರಾವಾಹಿ ಕಥೆ, ಮೂರು ಬಣ್ಣಗಳಿಂದ ರಂಜಿಸುವುದನ್ನು ನೋಡಿ ನಿಮ್ಮೆಲ್ಲರ ಪ್ರತ್ಯೇಕ ಸಂತೋಷಾನುಭವಗಳೂ ನಮಗೆ ಮುಟ್ಟಿವೆ. ನಾವು ಕಳೆದಬಾರಿ ಪ್ರಕಟಿಸಿದ 'ಶಾಲೆಯಲ್ಲಿ ನನ್ನ ತಂಟೆ'—ನೂರಾರು ಲೇಖನಗಳು ಬಂದಿವೆ. ಅವುಗಳಲ್ಲಿ ಬಹುಮಾನಿತ ಲೇಖವು ಈ ಸಂಚಿಕೆಯಲ್ಲಿ ಪ್ರಕಟವಾಗಿದೆ. ಉಳಿದವರು ತಮ್ಮ ಸೋಲನ್ನು ಗೆಲುಮೆಯ ಪ್ರಯತ್ನವೆಂದೇ ತಿಳಿಯಬೇಕು. 'ಧೂಮಕೇತು' ಕಥೆಯ ಬಗ್ಗೆ ನಿಮ್ಮ ಅಭಿಪ್ರಾಯವನ್ನು ತಿಳಿಸುವಿರಾ?

ಸಂಪುಟ ೧೨ : ಮಾರ್ಚಿ ೧೯೬೧ : ಸಂಚಿಕೆ ೩



# ಅಜ್ಜನ ರೈಲುಪ್ರಯಾಣ



ಅಜ್ಜೀ ಅಜ್ಜಾ ಅವಸರದಿಂದಲಿ
ಅಜ್ಜಂಪುರಕ್ಕೆ ಹೊರಟಾಗ
ಟಿಕೇಟು ಹಣ ಒಬ್ಬರಿಗಿತಷ್ಟೇ
ಅಖಂಡಬುದ್ಧ್ಯಜ್ಜಗೆ, ಬೇಗ
ಹಾಸಿಗೆ ಯೊಳಗೇ ಅಜ್ಜಿಯ ಮಲಗಿಸಿ
ರಾಯರಹಾಗೇ ರೈಲೇರಿ
ಹಾಸಿಗೆ ಬಳಿಯೇ ಜಮ್ಮನೆ ಕುಳಿತರು
ರೈಲೋಡಿತು ಮುಂದಕೆ ಸಾರಿ
ನೆರೆನಿಲ್ದಾಣದಿ ಬಂದ ವಕೀಲರು



ಸ್ಥಳವಿಲ್ಲದೆ ಆ ಹಾಸಿಗೆಯ
ಮೇಲಕ್ಕೊಗೆದು ಠೀವಿಲಿ ಮಂಡಿಸೆ
ತಾತ ಸೈಸಿ ಮುಚ್ಚಿದ ಬಾಯ.
ಮರುಚಣ ವೊಬ್ಬರು ಸ್ಯಾಬರು ಬಂದಾ
ಹಾಸಿಗೆ ಮೇಲೆಯೆ ಟ್ರಂಕಿಟ್ಟು
ಬಲು ಧೀ ಮಾಕಿಲಿ ಬೈಠಾಯಿಸಿದರು
ಅಜ್ಜಗೆ ಹೊಟ್ಟೆಲಿ ಪಿಟಿಪಿಟ್ಟು !
ಹಿಂದೆಯೆ ಬಂದಾ ಸಿನಿಮಾತಾರೆ
ಆ ಸ್ಯಾಬರ ಟ್ರಂಕಿನ ಮೇಲೇ,
ತನ್ನ ಟ್ರಂಕನೂ ಇರಿಸಿ ಚಕ್ಕನೇ
ಕುಳಿತಳು ತಾತನ ಪಕ್ಕದಲೇ !
ಟ್ರಂಕುಗಳೊಜ್ಜೆಗೆ ತಾಳದೆ ಅಜ್ಜಿ,

"ಮಾರಂಗ"

ರೈಲೂ ಮುಂದಕೆ ಸಾಗಿತ್ತು.
ತಾತಾ–ತಾರಾ–ವಕೀಲ–ಸ್ಯಾಬರ–
ಕೊರಿಯಾ ಕಾಳಗ ನಡೆದಿತ್ತು.
ಅಜ್ಜಿಗೆ ಹಾಸಿಗೆ ರಕ್ಷೆಯೆ ಆಯ್ತು!
ಮೆಲ್ಲನೆ ನುಸುಳುತೆ ಹೊರಗೆದ್ದು,
ಟ್ರಂಕು ತೆರೆಯಲದು ಸೀರೆ–ನಗಂಗಳು
ನೋಟುಕಟ್ಟುಗಳು ತುಂಬಿದ್ದು!
ಅಜ್ಜನ ಬುದ್ಧಿಯ ಸಹಿಸಿಕೊಂಡುದಕೆ
ಅಜ್ಜಿಯ ಅದೃಷ್ಟ ಹಣ್ಣಾದ್ದು!

ಸಂಕಟದಿಂ ಮೈಯಾಡಿಸಲು
ತಾರೆಯ ಟ್ರಂಕಜ್ಜನ ತಲೆಗಿಳಿಯಿತು.
ಕೋಪವುಕ್ಕಿ ತಜ್ಜಗೆ ಭುಗಿಲು!
ಆವೇಶದಿಯಾ ಟ್ರಂಕನ್ನಜ್ಜ
ಕಿಟಕಿಯಿಂದೆ ಹೊರಗಡೆ ಗೆಸೆಯಲ್
ತತ್‌ಕ್ಷಣ ತಾರೆ ಅಜ್ಜನದೆಂದೇ
ಸ್ಯಾಬರ ಟ್ರಂಕನು ಹೊರಗೊಗೆದಳ್
ಸ್ಯಾಬರಿಗೇನು—ಶೌರ್ಯವಿಲ್ಲವೆ?
ಅರರೇ ಎನುವಜ್ಜನ ತಳ್ಳಿ,
ಹಾಸಿಗೆಯನೆ ಹೊರಗಡೆ ಬೀಸೊಗೆದರ್
ಹಾಹಾಕ್ರತಿ ಬಹಳಾಯ್ತಲ್ಲಿ!
ಆ ವೊಳಗಾಗಲೆ ಕೂಗಿ ಗುಘಗುಘನೆ



# ಮುಖ ಚಿತ್ರ

ಗ್ರೀಷ್ಮಕಾಲದಲ್ಲೊಂದುದಿನ ಕೃಷ್ಣನೂ ಅರ್ಜುನನೂ ವಿನೋದ ವಿಹಾರಾರ್ಥವಾಗಿ ಹೊರಟಿದ್ದರು. ಅವರು ರಮಣೀಯ ಪ್ರದೇಶಗಳಲ್ಲೆಲ್ಲಾ ಸಂಚಾರಮಾಡಿ ಖಾಂಡವ ವನದ ಬಳಿಒಂದು ಸುಂದರವಾದ ಪ್ರದೇಶದಲ್ಲಿ ಕುಳಿತುಕೊಂಡರು.

ಆಗ ಒಬ್ಬ ಹಣ್ಣು ಮುದುಕನಾದ ಬ್ರಾಹ್ಮಣನು ಅವರಿದಿರಿಗೆ ಬಂದು-- "ನನಗೆ ಬಹಳ ಆಹಾರ ಬೇಕಾಗಿದೆ. ಅದನ್ನು ಕೊಡಬಲ್ಲಿರಾದರೆ, ನನ್ನ ಕತೆ ಹೇಳುವೆ" ಎಂದ. "ನಿಮಗೆ ಬೇಕಾದ ಆಹಾರ ನಾನು ಕೊಡುತ್ತೇನೆ" ಎಂದು ಅರ್ಜುನನು ಭರವಸೆಕೊಟ್ಟ. ಆಗ ಆ ಬ್ರಾಹ್ಮಣ ಹೀಗೆಂದ:

"ನಾನು ಅಗ್ನಿದೇವ. ಪೂರ್ವದಲ್ಲಿ ದೇವೇಂದ್ರನಿಗೆ ಸಮಾನವಾದ ಶ್ವೇತಕೀ ಎಂಬ ರಾಜನು ಯಾವಾಗಲೂ ಯಾಗಗಳನ್ನು ಮಾಡುತ್ತಿದ್ದ. ಅವನ ಯಾಗದ ಹೊಗೆಯಿಂದಲೇ ಬ್ರಾಹ್ಮಣರಿಗೆಲ್ಲ ಕಣ್ಣು ಬೇನೆ ಬಂತು. ತುಪ್ಪ ಕುಡಿದು ಕುಡಿದು ನನಗೆ ಉದರರೋಗವು ಪ್ರಾಪ್ತವಾಯಿತು. ನಾನು ಬ್ರಹ್ಮದೇವನ ಬಳಿಗೆ ಹೋಗಿ ಪರಿಹಾರ ಕೇಳಿದೆ. ಆದಕ್ಕೆ ಬ್ರಹ್ಮ 'ಖಾಂಡವವನವನ್ನು ಭಕ್ಷಿಸು. ಆದರಲ್ಲಿರುವ ನಾನಾ ಮೂಲಿಕೆಗಳ ಮಹಿಮೆಯಿಂದ ನಿನ್ನ ಉದರರೋಗ ನಾಶವಾಗುತ್ತದೆ' ಎಂದು ಹೇಳಿದ. ನಾನು ನನ್ನ ಎಲ್ಲಾ ಶಕ್ತಿಯಿಂದ ಈ ಖಾಂಡವವನವನ್ನು ದಹಿಸಿ ನುಂಗಲೆತ್ನಿಸಿದರೂ ದೇವೇಂದ್ರನು ಬಿಡುವುದಿಲ್ಲ. ಒನಕೆಯ ಧಾರೆಯಾಗಿ ಮಳೆ ಬರಿಸಿ ನನ್ನನ್ನು ಓಡಿಸುತ್ತಾನೆ. ಕಡೆಗೆ ನಾನು ಬ್ರಹ್ಮನೊಡನೆಯೇ ನನ್ನ ಬಾಧೆ ಯನ್ನು ಹೇಳಿಕೊಂಡಾಗ 'ಕೃಷ್ಣಾರ್ಜುನರು ಈ ವನದ ಬಳಿಗೆ ಬಂದಾಗ, ಅವರ ಸಹಾಯ ಕೇಳು. ಸಾಧ್ಯವಾಗುತ್ತದೆ' ಎಂದು ತಿಳಿಸಿದ. ಆದುದರಿಂದ ಈಗ ನನಗೆ ನೀವೇ ಸಹಾಯಮಾಡಿ ನನ್ನ ಉದರಶೂಲಿ ಹೋಗಲಾಡಿಸಬೇಕು."

ಅದನ್ನು ಕೇಳಿ ಕೃಷ್ಣಾರ್ಜುನರು:—"ನಮಗೆ ತಕ್ಕ ಶಸ್ತ್ರಾಸ್ತ್ರಗಳಿದ್ದರೆ ನಿಮಗೆ ಸಹಾಯ ಮಾಡಬಹುದಿತ್ತು" ಎಂದರು. ಅಗ್ನಿ ವರುಣನನ್ನು ಧ್ಯಾನಮಾಡಿದ. ವರುಣನು ಪ್ರತ್ಯಕ್ಷನಾಗಿ, ಅರ್ಜುನನಿಗೆ ದಿವ್ಯರಥವನ್ನೂ, ಅಕ್ಷಯದ ಬತ್ತಳಿಕೆ ಯನ್ನೂ, ಕೃಷ್ಣನಿಗೆ ಕೌಮೋದಕೀ ಎಂಬಗದೆಯನ್ನೂ ಕೊಟ್ಟು ಮಾಯವಾದನು.

ನಂತರ ಅಗ್ನಿಖಾಂಡವವನವನ್ನು ದಹನಮಾಡ ತೊಡಗಿದನು. ಅರ್ಜುನನು ಯಾವ ವಿಘ್ನವೂ ಬಾರದಂತೆ ಆ ವನದ ಸುತ್ತೂ ಬಾಣಗಳ ಕೋಟೆಯನ್ನು ಚಪ್ಪರ ವನ್ನೂ ಕಟ್ಟಿ ರಕ್ಷಿಸಿದನು. ಅಗ್ನಿ ನಿರ್ವಿಘ್ನವಾಗಿ ಹದಿನೈದು ದಿನಗಳ ದಹನಕಾರ್ಯ ದಿಂದ ತನ್ನ ಕೋರಿಕೆ ಈಡೇರಿಸಿಕೊಂಡನು.



# ಇಬ್ಬರು ವಿದ್ವಾಂಸರು

ಸಿಕ್ಕರಮತ ಸ್ಥಾಪಕನಾದ ಗುರುನಾನಕ್ ಸಂಗೀತಪ್ರಿಯನು. ದೇವರಮೇಲೆ ಮನಸ್ಸು ನೆಲಸಲು ಸುಮಧುರವಾದ ಸಂಗೀತವೇ ಒಳ್ಳೆಯ ಸಾಧನವೆಂದು ಆತನ ನಂಬಿಕೆ. ಆದುದರಿಂದ ನಾನಕ್ ಭಕ್ತಿಭರಿತವಾದ ಗಾನ ಮಾಡಿ, ತರಣೋಪಾಯ ಹೊಂದಬೇಕೆಂದು ನಿಶ್ಚಯಿಸಿದನು.

ತನ್ನ ಮತಪ್ರಚಾರಕ್ಕಾಗಿ ನಾನಕ್ ದಿನಾ ಒಂದೊಂದು ಪ್ರದೇಶದಲ್ಲಿ ಸಂಚಾರಮಾಡುತ್ತಿದ್ದನು. ಆ ಸಂಚಾರದಲ್ಲಿ ಸಂಗೀತ ಒದಗಿಸಲು ಬಾಯ್‌ಮಾರ್ದಾನ ಎಂಬ ಪ್ರಸಿದ್ಧ ವಿದ್ವಾಂಸನು ಆತನೊಂದಿಗೆ ಹೋಗುತ್ತಿದ್ದನು. ಮಾರ್ದಾನ ಬಹಳ ಇಂಪಾಗಿ ದೇವರ ಕೀರ್ತನೆಗಳನ್ನು ಹಾಡಿ, ಶ್ರೋತರಿಗೆ ತನ್ಮಯತೆಯನ್ನುಂಟುಮಾಡುತ್ತಿದ್ದನು.

ಗುರುನಾನಕ್ ಏರ್ಪಡಿಸಿದ ಈ ಸಂಪ್ರದಾಯವನ್ನು ಆಮೇಲೆ ಬಂದ ಸಿಕ್ ಗುರುಗಳೆಲ್ಲರೂ ಪಾಲಿಸಿಕೊಂಡು ಬಂದರು. ಆ ಗುರುಗಳಲ್ಲಿ ಐದನೇಯವನು ಅರ್ಜುನದೇವ್. ಆತನ ಹತ್ತಿರ ಶಾಂತ, ಬಲ್ವಂತ ಎಂಬ ಇಬ್ಬರು ವಿದ್ವಾಂಸರಿದ್ದರು. ಅವರು ಸಹೋದರರು. ಇಬ್ಬರೂ ಬಹಳ ಕಾಲದಿಂದ ತಮ್ಮ ಗಾನ ಮಾಧುರ್ಯದಿಂದ ಗುರುದೇವನಾದ ಅರ್ಜುನದೇವನನ್ನೂ ಮತ್ತು ಭಕ್ತರನ್ನೂ ಮೆಚ್ಚಿಸಿ ಜನಾನುರಾಗ ಪಡೆದರು.

ಕೆಲಕಾಲವಾದ ಮೇಲೆ ಶಾಂತ ಮತ್ತು ಬಲ್ವಂತರಿಗೆ ವಿವಾಹವಾಗುವ ಯೋಚನೆಯುಂಟಾಯಿತು. ಮದುವೆ ಎಂದರೆ ಸುಮ್ಮನಾಯಿತೇ? ಅಪಾರ ಹಣಬೇಕು. ಸರಿ, ಸಹೋದರರಿಬ್ಬರೂ ಒಂದು ದಿನ ಗುರುವಿನ ಹತ್ತಿರ ಹೋಗಿ ತಮ್ಮ ಅಭಿಲಾಷೆಯನ್ನು ತಿಳಿಸಿ, ಧನ ಸಹಾಯ ಪ್ರಾರ್ಥಿಸಿದರು. ಇವರ ಮಾತು ಕೇಳಿ ಅರ್ಜುನದೇವನು ಬಹಳ ಸಂತೋಷಪಟ್ಟನು.

"ಅಗತ್ಯವಾಗಿ ಸಹಾಯಮಾಡುವೆನು. ನಿಮಗೆಷ್ಟು ಹಣ ಬೇಕೋ ಹೇಳಿ" ಎಂದ ಗುರುದೇವ್. ಆಗ ಸಹೋದರರಿಬ್ಬರೂ ಪರಸ್ಪರ ಮಾತನಾಡಿಕೊಂಡು "ಗುರೂಜಿ,

ಜಿ. ಗುಂಡಣ್ಣ, ಕೊಯಂಬತ್ತೂರು






ಮಾರನೇಯ ದಿನ ಮಾಮೂಲು ವೇಳೆಗೆ ಶಾಂತ, ಬಲ್ವಂತರು ಭಜನೆಗೆ ಬರಲಿಲ್ಲ. ಅರ್ಜುನದೇವನು ಸುದ್ದಿ ಕಳುಹಿಸಿದ. "ಬರುವುದಿಲ್ಲ, ನಾವಿನ್ನುಮೇಲೆ ಬರುವುದೇ ಇಲ್ಲ" ಎಂದರು ಅವರು. ಹಾಗೆ ಹೇಳಿ ಅವರು ಸುಮ್ಮನಿರಲಿಲ್ಲ. "ನಾವು ಮಾಡುವ ಮಧುರ ಗಾನದಿಂದಲೇ ಭಜನೆಗೆ ಅಷ್ಟೊಂದು ಜನ ಬರುತ್ತಿದ್ದಾರೆ. ನಮ್ಮಿಂದಲೇ ಗುರುಗಳಿಗೆ ಖ್ಯಾತಿ ಬರುತ್ತಿದೆ. ಈಗಲೇ ಅಲ್ಲ, ಮೊತ್ತ ಮೊದಲನೇ ಸಿಕ್ಕಗುರುವಾದ ನಾನಕ್‌ಸಹ ತನ್ನ ಸಂಗೀತ ವಿದ್ವಾಂಸನಾದ ಬಾಯ್ ಮಾರ್ದನನ ಸಹಾಯದಿಂದಲೇ ಯಶಸ್ಸು ಪಡೆದ; ಕೀರ್ತಿಗಳಿಸಿದ" ಎಂದರು.

ಇಂದು ಸಾಯಂಕಾಲ ಭಜನೆಯ ಸಮಯದಲ್ಲಿ ಭಕ್ತಕೋಟಿ ಸಲ್ಲಿಸುವ ಹಣವನ್ನು ಕೊಟ್ಟರೆ ತೃಪ್ತರಾಗುವೆವು" ಎಂದರು.

ಅವರ ಅಭೀಷ್ಟದಂತೆ ಅಂದು ಸಾಯಂಕಾಲ ಭಕ್ತರಿಂದ ಸಂದಾಯವಾದ ಕಾಣಿಕೆಯನ್ನು ಗುರುದೇವನು ಅವರಿಗೆ ಕೊಟ್ಟನು. ಅದೇನು ವಿಚಿತ್ರವೋ, ಅಂದು ಪ್ರತಿದಿನಕ್ಕಿಂತಲೂ ತುಂಬಾ ಕಡಿಮೆ ಹಣ ವಸೂಲಾಗಿತ್ತು. 'ಈ ಗುರುದೇವನು ಬೇಕೆಂತಲೇ ಹೀಗೆ ಮಾಡಿರಬಹುದು. ಮೊದಲೇ ಏನೋ ವ್ಯವಸ್ಥೆ ಮಾಡಿದ್ದರಿಂದಲೇ ಇಂದು ಇಷ್ಟು ಕಡಿಮೆ ಹಣ ಸಂದಾಯವಾಯಿತು' ಎಂದು ಭಾವಿಸಿ, ಅವರು ಒಂದು ರೀತಿದರ್ಪದಿಂದ ಭಜನೆ ಮಂದಿರದಿಂದ ಎದ್ದು ಹೊರಟುಹೋದರು.

ಈ ಪ್ರಸಂಗ ಕೇಳಿ ಅರ್ಜುನದೇವನಿಗೆ ತುಂಬಾ ವೇದನೆ ಆಯಿತು. ಕೂಡಲೇ ಆತನು ಶಾಂತ ಮತ್ತು ಬಲ್ವಂತಸಿಂಗರ ಮನೆಗೆ ಸ್ವತಃ ಹೋಗಿ ಭಜನೆಗೆ ಬರುವಂತೆ ಕರೆದ. ಆದರೆ ಅವರು ಗುರುಗಳಿಗೂ ಸಹ ಅದೇ ಮಾತು ಹೇಳಿದರು. ಮಹಾಮಹಿಮನಾದ ಗುರುವಾದ ನಾನಕನನ್ನು ಅವಹೇಳನಮಾಡಿ ಆ ರೀತಿ ಜರಿದು ಮಾತನಾಡುವುದನ್ನು ಕೇಳಿ ಅರ್ಜುನ ದೇವನಿಗೆ ತುಂಬಾ ಕೋಪ ಬಂತು.

"ದೇವರನ್ನು ಸ್ತುತಿಸಲು ವಿನಿಯೋಗಿಸದ ನಿಮ್ಮ ಸಂಗೀತ ವಿದ್ಯೆ ನಿಮಗೆ ಜೀವನದಲ್ಲಿ ಸಹಕಾರಿಯಾಗದಿರಲಿ" ಎಂದು ಶಾಪಕೊಟ್ಟ. ಗುರುದೇವರ ವಾಕ್‌ಶುದ್ಧಿಯ ಪ್ರಭಾವದಿಂದ ಅಂದಿನಿಂದ ಆ ಸಹೋದರರ ನಾಲಗೆಗಳು





ಸ್ವಾಧೀನ ರಹಿತವಾದವು. ಅವರು ನಾನಾ ಯಾತನೆಗೊಳಗಾದರು. ತಿಂಡಿ ತೀರ್ಥಗಳು ಗಂಟಲೊಳಗೆ ಇಳಿಯುವುದೂ ಸಹ ಬಹಳ ಕಷ್ಟವಾಯಿತು.

ಅರ್ಜುನದೇವನು ಭಜನೆಗೆ ಬಂದವರನ್ನು ಕುರಿತು "ಅಪ್ಪಗಳಿರಾ, ಅಣ್ಣಗಳಿರಾ ನಿಶ್ಚಲ ಭಕ್ತಿಯಿಂದ ದೇವರ ಪ್ರಾರ್ಥನೆ ಮಾಡಿ. ನಿಮಗೆ ಇಷ್ಟಬಂದ ವಾದ್ಯಗಳನ್ನು ಬಾರಿಸುತ್ತಾ ಕೀರ್ತನೆಗಳನ್ನು ಹಾಡಿ" ಎಂದು ಆದೇಶಕೊಟ್ಟ. ಆ ಮಾತುಗಳನ್ನುಕೇಳಿ ಅಲ್ಲಿ ನೆರೆದಿದ್ದವರೆಲ್ಲರೂ ಒಂದೊಂದು ವಾದ್ಯವನ್ನು ತೆಗೆದುಕೊಂಡು ಉಚ್ಚಧ್ವನಿಯಲ್ಲಿ ಭಗವನ್ನಾಮಸ್ಮರಣೆ ಮಾಡಿದರು. ಸಂಗೀತದ ಗಂಧವನ್ನೇ ಅರಿಯದಾತನೂ ಸಹ ಅದ್ಭುತವಾಗಿ ಅನುಭವಸ್ಥನಂತೆ ಹಾಡಿದನು! ಎಂದೂ ಕಂಡೂ ಕಾಣದ ವಾದ್ಯಗಳನ್ನು ಅವರು ತುಂಬಾ ಚೆಲೋದಾಗಿ ಬಾರಿಸಿದರು!

ಕೆಲವು ದಿನಗಳಾದಮೇಲೆ ಶಾಂತ ಬಲ್ವಂತರು ತಮ್ಮ ತಪ್ಪನ್ನು ತಿಳಿದುಕೊಂಡರು. ಗುರುದೇವನಿಗೆ ಮುಖ ತೋರಿಸಲು ನಾಚಿ, ಸ್ನೇಹಿತರ ಸಂಗಡ ಕ್ಷಮಾಪಣೆ ಕೇಳಿಕೊಂಡರು. ಅದಕ್ಕೆ ಗುರುದೇವನು ಕುಪಿತನಾಗಿ "ಭಗವಂತನು ಕರುಣಿಸಿದ ಕಂಠಮಾಧುರ್ಯವನ್ನು ಭಗವಂತನ ಕೀರ್ತನೆಗೆ ಉಪಯೋಗಿಸಲು ನಿರಾಕರಿಸಿದವರಿಗೆ ಕ್ಷಮಾಪಣೆ ಎಂತಹದು? ಇನ್ನುಮೇಲೆ ಈ ವಿಷಯವಾಗಿ ನನ್ನೊಂದಿಗೆ ಯಾರಾದರೂ ಮಾತನಾಡಲು ಬಂದರೆ, ಅವರ ಮುಖಕ್ಕೆ



ಮಸಿ ಬಳಿಸಿ, ಕತ್ತೆಯಮೇಲೆ ಮೆರವಣಿಗೆ ಮಾಡಿಸೇನು" ಎಂದು ಕಠಿನವಾಗಿ ಹೇಳಿದ.

ಅರ್ಜುನದೇವನು ಹೀಗೆ ಹೇಳಲು, ಈ ಪ್ರಸಂಗದಲ್ಲಿ ತಲೆ ಹಾಕಲು ಯಾರೂ ಇಷ್ಟ ಪಡಲಿಲ್ಲ. ಏನೂ ಲಾಭವಿಲ್ಲವೆಂದು ತಿಳಿದ ಕೂಡಲೇ ಶಾಂತ, ಬಲ್ವಂತರು ಲಾಹೋರಿಗೆ ಹೋಗಿ ಲಾಧಾಜೀ ಎಂಬ ಮಹಾನುಭಾವನಿಗೆ ಶರಣಾದರು. ಲಾಧಾಜಿ ಆ ಪ್ರಾಂತದಲ್ಲಿ ಪರೋಪಕಾರಿ ಎಂದು ಪ್ರಸಿದ್ಧಿ ಪಡೆದಾತ. ಪರರಿಗೋಸ್ಕರ ಎಂತಹ ತ್ಯಾಗವನ್ನಾದರೂ ಮಾಡಬಲ್ಲ ಪುಣ್ಯಾತ್ಮ. ಆ ಸಹೋದರರು ಹೋಗಿ ತಮಗಾದ ಪರಾಭವವನ್ನು ಹೇಳಿ ಕೊಳ್ಳಲು, ಲಾಧಾಜಿಗೆ ಕನಿಕರವಾಯಿತು. "ಸರಿ, ನೀವು ಹೋಗಿ. ನಾನು ನೋಡಿ ಕೊಳ್ಳುತ್ತೇನೆ" ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟ.

ಅವರು ಅತ್ತ ಹೋದಕೂಡಲೇ ಲಾಧಾಜಿ ಮುಖಕ್ಕೆ ಮಸಿ ಬಳಿದುಕೊಂಡು ಕತ್ತೆಯ ನ್ನೇರಿ ಅರ್ಜುನದೇವನ ಹತ್ತಿರಕ್ಕೆ ಹೊರಟ. ಲಾಧಾಜಿ ಅಮೃತಸರ್ ಸೇರುವವೇಳೆಗೆ ಭಾರಿ ಕೋಲಾಹಲವೆದ್ದಿತು. ಪುರುಷರು, ಸ್ತ್ರೀಯರು, ಮಕ್ಕಳು ಮರಿಗಳು ಗುಂಪು ಗುಂಪಾಗಿ ಸೇರಿ ಭಾರಿ ಗದ್ದಲ ಎಬ್ಬಿಸಿದರು. ಈ ವಿಚಿತ್ರ ರೀತಿಯಲ್ಲಿ ಬರುತ್ತಿರುವಾತ ಲಾಧಾಜಿ ಎಂದು ತಿಳಿದಕೂಡಲೇ ಜನ ಆಶ್ಚರ್ಯಚಕಿತರಾದರು. ಅವರು ಕೂಡಲೇ ಗುರುದೇವನಿಗೆ ಈ ಸುದ್ದಿ ತಿಳಿಸಿದರು.

ಅರ್ಜುನದೇವನಿಗೂ ಅಚ್ಚರಿ ಆಯಿತು. ಬಾಯ್ ಲಾಧಾಜಿ ತೋರಿದ ಪರೋಪ ಕಾರಕ್ಕೆ ಆತನು ಅಮಿತ ಆನಂದಗೊಂಡ. ಆತನಿಗೆ ಉಚಿತ ಮರ್ಯಾದೆಗಳನ್ನು ಮಾಡಿ, ಶಾಂತಬಲ್ವಂತಸಿಂಗರನ್ನು ಕ್ಷಮಿಸಿ, ಲಾಧಾಜಿ ಯನ್ನು ಸಂತೋಷಗೊಳಿಸಿದ.

ಅಂದಿನಿಂದ ಶಾಂತಬಲ್ವಂತರು ಬುದ್ಧಿ ತಂದುಕೊಂಡು ಅವರ ಸಂಗೀತ ಪ್ರತಿಭೆ ಯನ್ನು ದೇವರ ನಾಮಸಂಕೀರ್ತನೆಗಾಗಿಯೇ ವಿನಿಯೋಗಿಸಿ, ಧನ್ಯರಾದರು.

ಅಂದಿನಿಂದ ಲಾಧಾಜಿಗೆ 'ಲಾಧಾ ಪರೋಪ ಕಾರಿ' ಎಂಬ ಬಿರುದು ಸಾರ್ಥಕವಾಗಿ ನಿಂತು ಪ್ರಸಿದ್ಧ ವಾಯಿತು.






# ಜ್ಞಾತಿ ವೈರ

ಪೂರ್ವಕಾಲದಲ್ಲಿ ಕಾಶೀರಾಜ್ಯವನ್ನು ಆಳುತಿದ್ದ ಬ್ರಹ್ಮದತ್ತನಿಗೆ ನೂರುಜನ ಕುಮಾರರಿದ್ದರು. ಅವರಲ್ಲೆಲ್ಲಾ ಕಿರಿಯವನ ಹೆಸರು ಸಂವರ. ಮಕ್ಕಳನ್ನೆಲ್ಲಾ ಆ ರಾಜನು ಒಬ್ಬೊಬ್ಬ ಗುರುವಿಗೆ ಒಪ್ಪಿಸಿ ವಿದ್ಯೆ ಕಲಿಸಿ ಕೊಟ್ಟ. ಸಂವರನ ಗುರು ಬೋಧಿಸತ್ವ.

ಬೋಧಿಸತ್ವನು ಸಾಮಾನ್ಯನೇ? ಆತನು ಮಹಾಜ್ಞಾನಿ. ರಾಜಪುತ್ರನಿಗೆ ಪಿತೃಸಮಾನನಾಗಿದ್ದು, ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದ. ಸಂವರನೂ ಸಹ ಗುರುಭಕ್ತಿಯಿಂದ, ಬೋಧಿಸತ್ವನ ಮಾತಿಗೆ ಪ್ರತಿಯಾಡದೆ ವಿಧೇಯನಾಗಿ ನಡೆದುಕೊಳ್ಳುತ್ತಿದ್ದ.

ಕೆಲವು ಕಾಲದ ನಂತರ ಗುರುಗಳೆಲ್ಲರೂ ತಮ್ಮ ತಮ್ಮ ಶಿಷ್ಯರನ್ನು ಕರೆದುಕೊಂಡು ಬಂದು "ಮಹಾ ಪ್ರಭೂ, ತಮ್ಮ ಮಕ್ಕಳು ಸಕಲವಿದ್ಯಾ ಸಂಪನ್ನರಾದರು" ಎಂದು ಹೇಳಿ, ರಾಜನಿಗೆ ಅವರನ್ನು ಒಪ್ಪಿಸಿ ಆತನಿಂದ ಸನ್ಮಾನಗಳನ್ನು ಪಡೆದು ಹಿಂತಿರುಗುತ್ತಿದ್ದರು. ಮಕ್ಕಳ ಪ್ರತಿಭೆಗೆ ಮೆಚ್ಚಿ ರಾಜನು ಸಂತೋಷದಿಂದ ವಿಭಾಗಮಾಡಿ ಪ್ರತಿಯೊಬ್ಬನಿಗೂ ಒಂದೊಂದು ರಾಜ್ಯವನ್ನು ಕೊಟ್ಟನು.

ಕಿರಿಯವನಾದ ಸಂವರನ ವಿದ್ಯಾಭ್ಯಾಸ ಮುಗಿದ ನಂತರ, ಆತನು ಗುರುಗಳ ಹತ್ತಿರ ಹೋಗಿ "ಗುರುವರ್ಯ, ನನ್ನ ತಂದೆ ನನಗೆ ಯಾವುದಾದರೂ ರಾಜ್ಯವನ್ನು ಒಪ್ಪಿಸಿದರೆ ನಾನೇನು ಮಾಡಬೇಕು?" ಎಂದು ಕೇಳಿದನು.

ಅದಕ್ಕೆ ಬೋಧಿಸತ್ವನು "ಕುಮಾರ, ನಿನಗೆ ನಿಮ್ಮ ತಂದೆಯವರು ರಾಜ್ಯ ಕೊಡಲು ಇಷ್ಟಪಟ್ಟರೆ ನೀನು 'ಪ್ರಭೂ, ನಾನೆಲ್ಲರಿಗಿಂತಲೂ ಕಿರಿಯವನು. ನಾನು ರಾಜ್ಯದಲ್ಲಿ ಪಾಲು ತೆಗೆದುಕೊಂಡು ಹೊರಟುಬಿಟ್ಟರೆ ನಿಮ್ಮನ್ನು ನೋಡಿಕೊಳ್ಳುವವರು ಯಾರಿರುತ್ತಾರೆ? ನನಗೆ ರಾಜ್ಯದಿಂದ ಕೆಲಸವಿಲ್ಲ. ನಿಮ್ಮ ಪಾದಪದ್ಮಗಳ ಬಳಿ ಇರುತ್ತೇನೆ. ಇದೇ ನನ್ನ ಕರ್ತವ್ಯ, ಧರ್ಮ' ಎಂದು ಹೇಳು" ಎಂಬುದಾಗಿ ಬೋಧಿಸಿದ.

ಒಂದು ದಿನ ರಾಜನು ಬೋಧಿಸತ್ವನ ಆಶ್ರಮಕ್ಕೆ ಬಂದ. ಸಂವರನು ತಂದೆಗೆ

ಯಚ್. ನಾರಾಯಣರಾವು




ನಮಸ್ಕಾರಮಾಡಿ ಬಂದು ಪಕ್ಕದಲ್ಲಿ ನಿಂತು ಕೊಂಡ. "ನಿನ್ನವಿದ್ಯೆ ಪೂರ್ತಿ ಆಯಿತೇ ಮಗೂ?" ಎಂದು ರಾಜನು ಅವನನ್ನು ಕೇಳಿದ. "ಪೂರ್ತಿ ಆಯಿತು, ಅಪ್ಪಾ" ಎಂದು ವಿನಯ ದಿಂದ ಉತ್ತರವಿತ್ತ ಸಂವರ.

"ಹಾಗಾದರೆ ನಿನಗೆ ಇಷ್ಟಬಂದ ರಾಜ್ಯ ವನ್ನು ಆರಿಸಿಕೋ" ಎಂದ ರಾಜ.

ಅದಕ್ಕೆ ಸಂವರನು "ಅಪ್ಪಾ, ನಾನೆಲ್ಲರಿ ಗಿಂತಲೂ ಕಿರಿಯವನು. ನಾನೂ ರಾಜ್ಯ ಹಂಚಿಕೊಂಡು ಬೇರೆ ಹೋಗಿಬಿಟ್ಟರೆ ನಿಮ್ಮನ್ನು ನೋಡಿಕೊಳ್ಳುವವರು ಯಾರು ಇರುತ್ತಾರೆ? ನನಗೆ ರಾಜ್ಯಬೇಕಿಲ್ಲ. ನಿಮ್ಮ ಪಾದಪದ್ಮಗಳ ಬಳಿಯಿರಬೇಕೆಂಬುದೇ ನನ್ನ ಅಭಿಲಾಷೆ" ಎಂದು ಹೇಳಿದ.

ಮಗನ ಮಾತುಗಳನ್ನು ಕೇಳಿ ರಾಜನು ಸಂಪ್ರೀತನಾಗಿ "ಸರಿ ಹಾಗೇ ಮಾಡು" ಎಂದ. ಈ ಮಾತಿನ ಪ್ರಕಾರ ಸಂವರನು ತಂದೆಯ ಸೇವೆಮಾಡುತ್ತಾ ತಂದೆಯ ಸಮ ಕ್ಷಮದಲ್ಲೇ ಇರುತ್ತಿದ್ದ. ಆಗಾಗ್ಗೆ ಹೋಗಿ ತನ್ನ ಗುರುಗಳಾದ ಬೋಧಿಸತ್ವನ ಸಲಹೆ ಪಡೆಯುತ್ತಿದ್ದ.

ಒಂದು ದಿನ ಸಂವರನು ಬೋಧಿಸತ್ವನನ್ನು ಕುರಿತು, "ಗುರುಗಳೇ, ನಾನು ಈಗಿನ್ನೇನು ಮಾಡಬೇಕು?" ಎಂದ.

ಗುರುವಿನ ಸಲಹೆಯಂತೆ ಸಂವರನು ತಂದೆಯನ್ನು ಕೇಳಿ ಸ್ವಲ್ಪ ಬಂಜರುಭೂಮಿ ಯನ್ನು ತೆಗೆದುಕೊಂಡ. ಆ ಪ್ರದೇಶವನ್ನು ಉದ್ಯಾನವನ್ನಾಗಿ ಮಾಡಿದ. ಆ ಊರಿನ ಗಣ್ಯಮಹನೀಯರನ್ನೆಲ್ಲಾ ಆ ವನಕ್ಕೆ ಆಹ್ವಾ ನಿಸಿದ. ಈ ರೀತಿ ಸಂವರನಿಗೆ ಅನೇಕರ ಪರಿಚಯವಾಯಿತು.

ತರುವಾಯ ತಂದೆಯ ಅನುಮತಿ ಪಡೆದು ಸಂವರನು ನಗರದಲ್ಲಿದ್ದ ಚತುರ್ವರ್ಣಗಳಿಗೂ ಸಂತರ್ಪಣೆ ಮಾಡಿಸಿದ. ಮತ್ತೊಂದು ದಿನ ರಾಜಾಶ್ರಿತರಿಗೂ, ಪರಿವಾರಕ್ಕೂ ಸಮಾ ರಾಧನೆ ಮಾಡಿಸಿದ. ಇನ್ನೊಂದು ದಿನ ರಾಜ್ಯ ದಲ್ಲಿದ್ದ ಪದಾತಿದಳಕ್ಕೂ, ಅಶ್ವದಳಕ್ಕೂ ಭಾರಿ ಭೋಜನಕೂಟವೇರ್ಪಡಿಸಿದ.

ತರುವಾಯ ಗುರುವಿನಾಜ್ಞೆಯಂತೆ ಸಂವ ರನು ತಂದೆಯ ಅನುಮತಿ ಪಡೆದು ಹೊರ ದೇಶಗಳಿಂದ ರಾಜಭವನಕ್ಕೆ ಬರುವ ರಾಯ

ಭಾರಿಗಳಿಗೂ, ವರ್ತಕಪ್ರಮುಖರಿಗೂ ಉಚಿತವಾದ ವಸತಿ ಮುಂತಾದುವನ್ನು ತಾನೇ ಸ್ವತಃ ಏರ್ಪಾಟುಮಾಡುತ್ತಿದ್ದ. ತಂದೆಯ ಸಮಕ್ಷಮದಲ್ಲೇ ಇದ್ದು, ಇಂತಹ ಉತ್ತಮ ಕಾರ್ಯಗಳನ್ನು ನಿರ್ವಹಿಸುತ್ತಾ, ಸಂವರನು ರಾಜ್ಯದಲ್ಲಿ ಎಲ್ಲರಿಗೂ ಅಚ್ಚುಮೆಚ್ಚಾಗಿ ಬೇಕಾದವನಾದನು.

ಸ್ವಲ್ಪಕಾಲಾನಂತರ ವೃದ್ಧನಾದ ರಾಜನಿಗೆ ಅವಸಾನಕಾಲ ಸನ್ನಿಹಿತವಾಯಿತು. ಆಗ ಮಂತ್ರಿಗಳು ಬಂದು "ತಮ್ಮ ನಂತರ ಚಕ್ರಾಧಿಪತ್ಯ ಯಾರದು? ಆಳುವ ಮಹಾಸ್ವಾಮಿಯವರ ಇಚ್ಛೆಯಂತೆ ನಡೆದುಕೊಳ್ಳುವೆವು. ಅಪ್ಪಣೆ ಕೊಡಿ" ಎಂದು ಕೇಳಿದರು.

ಅದಕ್ಕೆ ರಾಜನು "ಮಂತ್ರಿವರ್ಯರೇ, ನನ್ನ ನೂರು ಮಕ್ಕಳಿಗೂ ಚಕ್ರಾಧಿಪತ್ಯ ಹೊಂದುವ ಹಕ್ಕಿದೆ. ಅವರಲ್ಲಿ ನಿಮಗೆ ಯಾರು ಸರಿಕಂಡುಬಂದರೆ ಅವರಿಗೆ ಪಟ್ಟಾಭಿಷೇಕ ಮಾಡಿ" ಎಂದ.

ತರುವಾಯ ಮಂತ್ರಿಗಳೆಲ್ಲಾ ಸಮಾಲೋಚನೆ ಮಾಡಿದರು. ಎಲ್ಲರ ಮನವೂ ಸಂವರನ ಕಡೆಯೇ ವಾಲಿತು. ಆ ಪ್ರಕಾರವೇ ಸಂವರನಿಗೆ ಅತಿ ವೈಭವದಿಂದ ಪಟ್ಟಗಟ್ಟಿದರು.

ಗುರುವರ್ಯನ ಸಲಹೆ ಪಡೆಯುತ್ತಾ ಸಂವರನು ನ್ಯಾಯಮಾರ್ಗದಿಂದ ರಾಜ್ಯಭಾರ ಮಾಡುತ್ತಿದ್ದನು. ಹೀಗೆ ಇರಲು ತಂದೆಯ ಮರಣಾನಂತರ ಸಂವರನು ಚಕ್ರಾಧಿಪತ್ಯವನ್ನು ವಹಿಸಿದ ಸುದ್ದಿ ಉಳಿದ ತೊಂಬ



ತ್ತೊಂಬತ್ತು ಜನ ಸಹೋದರರಿಗೆ ತಿಳಿಯಿತು. 'ಹಿರಿಯರು ನಾವಿರುವಾಗ, ಕಣ್ಣು ತೆರೆಯದ ಪಸುಳೆ—ಸಂವರನಿಗೆ ಚಕ್ರಾಧಿಪತ್ಯ ಹೇಗೆ ಸಲ್ಲುವುದು?' ಎಂದು ಅವರಲ್ಲವರು ವಾದ ಮಾಡ ತೊಡಗಿದರು.

ಆ ಸಹೋದರರೆಲ್ಲಾ ಒಂದಾದರು. 'ಚಕ್ರಾಧಿಪತ್ಯವನ್ನು ತ್ಯಜಿಸುವೆಯಾ, ಇಲ್ಲ ನಮ್ಮೊಂದಿಗೆ ಯುದ್ಧಮಾಡುವೆಯಾ?' ಎಂದು ಕಿರಿಯವನ ಹತ್ತಿರಕ್ಕೆ ರಾಯಭಾರ ಕಳುಹಿಸಿದರು. ಅಷ್ಟೇ ಅಲ್ಲ, ತಮ್ಮ ತಮ್ಮ ಸೈನ್ಯದೊಂದಿಗೆ ಕೋಟೆಗೆ ಮುತ್ತಿಗೆ ಹಾಕಿದರು.

ಈ ವಿಷಯವನ್ನು ಸಂವರನು ಗುರುಗಳಿಗೆ ತಿಳಿಸಿದ. ಆಗ ಬೋಧಿಸತ್ವನು "ಧರ್ಮಪ್ರಭೂ, ನೀನು ನಿನ್ನ ಸಹೋದರರೊಂದಿಗೆ



ಹುಟ್ಟಿದ ಸಹೋದರರೊಂದಿಗೆ ಯುದ್ಧ ಬೇಡ ವೆನ್ನುವನು. ನಮ್ಮ ಪಾಲಿಗೆ ಬರಬೇಕಾದ ಆಸ್ತಿಯನ್ನೂ ನಮಗೆ ಹಂಚಿಬಿಟ್ಟಿದ್ದಾನೆ! ಇಂಥ ಗುಣಾಢ್ಯನಿಗೆ ನಾವು ಏನು ಪ್ರತಿಹೇಳ ಲಾದೀತು? ಅವನಲ್ಲಿ ಏನು ತಪ್ಪು ಕಂಡು ಹಿಡಿಯಬಲ್ಲೆವು? ಅದೊಂದು ಕಡೆ ಇರಲಿ. ನಮಗೆಲ್ಲಾ ಚಕ್ರಾಧಿಪತ್ಯವಹಿಸುವ ಹಕ್ಕಿರುವ ಮಾತು ನಿಜ. ಆದರೆ ಎಲ್ಲರೂ ಒಂದೇಸಾರಿ ಅದನ್ನು ಹೊಂದಲಾರೆವು. ಹೌದೋ? ಈ ಪರಿಸ್ಥಿತಿಯಲ್ಲಿ ಈಗ ಸಂವರನನ್ನೇ ಚಕ್ರಾಧಿ ಪತಿಯನ್ನಾಗಿ ಮಾಡಿ, ಈ ಆಸ್ತಿಪಾಸ್ತಿಗಳ ನ್ನೆಲ್ಲಾ ರಾಜ್ಯಕ್ಕೆ ಒಪ್ಪಿಸುವುದು ಉತ್ತಮ ವೆಂದು ನನಗೆ ತೋರುವುದು" ಎಂದ.

ಎಂದಿಗೂ ಜಗಳ ಮಾಡಬಾರದು. ನಿನ್ನ ತಂದೆಯ ಆಸ್ತಿಯನ್ನ ನೂರುಪಾಲು ಮಾಡು. ನಿನ್ನ ಸಹೋದರರಿಗೆ 'ನಿಮಗೆ ಸೇರಬೇಕಾದ ಪಾಲು ಇದೋ ತೆಗೆದುಕೊಳ್ಳಿ, ಒಡ ಹುಟ್ಟಿದ ಸಹೋದರರೊಂದಿಗೆ ನನಗೆ ಯುದ್ಧ ಬೇಡ' ಎಂದು ಬರೆದು ಕಳುಹಿಸು" ಎಂದು ಸಲಹೆ ಕೊಟ್ಟ. ಅದೇ ರೀತಿ ಮಾಡಿದ ಸಂವರ.

ಆಗ ಸಹೋದರರಲ್ಲೆಲ್ಲಾ ಹಿರಿಯವನಾದ ಉಪೋಸತನು ಉಳಿದವರೆಲ್ಲರನ್ನೂ ಒಂದು ಕಡೆ ಆಹ್ವಾನಿಸಿ 'ತಮ್ಮಂದಿರಾ ಈ ಬಾಲಕನು ನಿಜವಾಗಿ ನೋಡಿದರೆ ನಮ್ಮ ಶತ್ರು. ವೈರಿ ವರ್ಗದವನು. ಆದರೂ ಸಹ ಹಾಗೆಣಿಸಲು ನಮಗೆ ಆತನು ಅವಕಾಶ ಕೊಡಲಿಲ್ಲ. ಆತನ ಚರ್ಯೆಗಳೆಲ್ಲಾ ಜನಸಮ್ಮತವಾಗಿವೆ. ಒಡ

ಈ ಸಲಹೆಯನ್ನು ಎಲ್ಲರೂ ಅನುಮೋದಿಸಿದರು. ಅವರೆಲ್ಲರೂ ತಮ್ಮ ಸೇನೆಯೊಂದಿಗೆ ನಗರವನ್ನು ಪ್ರವೇಶಿಸಿದರು. ಆದರೆ ಮುತ್ತಿಗೆ ಹಾಕಲಲ್ಲ, ಸಹೋದರನಾದ ಸಂವರನಿಗೆ ಗೌರವ ಸಲ್ಲಿಸುವಸಲುವಾಗಿಯೇ ಈ ಬಗೆಯ ನಗರ ಪ್ರವೇಶ!

ಸಂವರನು ತನ್ನ ಸಹೋದರರಿಗೆ ಅಭೂತ ಪೂರ್ವವಾದ ಸ್ವಾಗತ ಕೊಟ್ಟನು. ಅವ ರೆಲ್ಲರೂ ಉಚಿತಸ್ಥಾನಗಳನ್ನು ಅಲಂಕರಿಸಿದ ನಂತರ ಚಕ್ರಾಧಿಪತಿಯಾದ ಸಂವರನು ಸಿಂಹಾಸನದಮೇಲೆ ರಾಜಠೀವಿಯಿಂದ ಕುಳಿತುಕೊಂಡ.

ಕಿರಿಯ ಸಹೋದರನಾದ ಸಂವರನನ್ನು ನೋಡಿ ಉಪೋಸತನು ಮನಸ್ಸಿನಲ್ಲಿ



ಹೀಗೆಂದುಕೊಂಡ 'ತನ್ನ ತರುವಾಯ ಸಿಂಹಾಸನವನ್ನು ಏರುವ ಅರ್ಹತೆ ಸಂವರ ನಿಗೇ ಇರುವುದೆಂದು ನಮ್ಮ ತಂದೆ ನಿಶ್ಚಯಿಸಿರಬೇಕು. ಈ ಉದ್ದೇಶದಿಂದಲೇ ನಮ್ಮೆಲ್ಲರಿಗೂ ತಲಾ ಒಂದೊಂದು ರಾಜ್ಯವನ್ನು ಕೊಟ್ಟು ಕಿರಿಯವನಿಗೆ ಮಾತ್ರ ಯಾವ ರಾಜ್ಯವನ್ನೂ ಕೊಡದೆ ಇದ್ದುಬಿಟ್ಟರು'

ಉಪೋಸತನು ತಮ್ಮನ ಕಡೆ ತಿರುಗಿ "ಧರ್ಮಪ್ರಭು, ಎಲ್ಲರೊಂದಿಗೆ ಇಷ್ಟೊಂದು ಒಳ್ಳೆಯವನಾಗಿರುವ ಶಕ್ತಿ ನಿನಗೆ ಹೇಗುಂಟಾಯಿತು? ಇದೇನಾದರೂ ಮಂತ್ರ ಪ್ರಭಾವವೋ, ಮಾಯೆಯೋ? ಬಹಳ ಆಶ್ಚರ್ಯಕರವಾಗಿದೆ" ಎಂದು ಪ್ರಶ್ನೆಮಾಡಿದ.

ಆಗ ಸಂವರನು "ಅಣ್ಣಾ, ನನಗೆ ಮಂತ್ರಗಳೂ, ಮಾಯಗಳೂ ತಿಳಿಯವು. ಹಿರಿಯರನ್ನು ಪೂಜಿಸುವೆನು. ಯತೀಶ್ವರರಿಗೆ ಸೇವೆ ಮಾಡುವೆನು. ಎಲ್ಲಿದ್ದರೂ ಒಳ್ಳೆಯದನ್ನು ಗ್ರಹಿಸುವೆನು. ಯಾರನ್ನೂ ದ್ವೇಷಿಸುವುದಿಲ್ಲ. ನನ್ನ ಪರಿವಾರಕ್ಕೆ ಸಂಬಳ ಸಾರಿಗೆಗಳನ್ನು ಸಕಾಲದಲ್ಲಿ ಸಲ್ಲಿಸುವೆನು. ನನ್ನ ರಾಜ್ಯಕ್ಕೆ ಬರುವ ವರ್ತಕರನ್ನೂ, ರಾಯಭಾರಿಗಳನ್ನೂ ಉಚಿತರೀತಿಯಲ್ಲಿ ಗೌರವಿಸುವೆನು. ಇದೇ ಮೊದಲಿನಿಂದಲೂ ನನ್ನ ರಾಜ್ಯದಲ್ಲಿ ನಡೆಯುತ್ತಿರುವ ಕಾರ್ಯ. ಮತ್ತೇನೂ ಇಲ್ಲ" ಎಂದು ಮಧುರವಾಗಿ ಹೇಳಿದ.

ಆಗ ತಮ್ಮನ ಗುಣಗಳನ್ನು ಮೆಚ್ಚಿಕೊಂಡು ಉಪೋಸತನು ಹೀಗೆಂದ: "ಸಹೋದರ, ಸಂವರ, ಇದೇರೀತಿ ಧರ್ಮರೀತಿಯಾಗಿ ನೀನು ರಾಜ್ಯವನ್ನು ಆಳಿ ಕೀರ್ತಿ ಸಂಪಾದಿಸು. ನಿನ್ನ ಸಹೋದರರಾದ ನಾವೆಲ್ಲರೂ ನಿನಗೆ ಆಶೀರ್ವಾದ ಮಾಡುವೆವು. ನಿನಗೆ ಶತ್ರುಭಯವೇ ಇಲ್ಲ. ನಿನ್ನನ್ನು, ನಿನ್ನ ಆಸ್ತಿಯನ್ನು ನಾವು ಸಾವಿರ ಕಣ್ಣುಗಳಿಂದ ನೋಡಿಕೊಳ್ಳುವೆವು. ಭೂಲೋಕದಲ್ಲಿ ನೀನು ಇಂದ್ರಪದವಿಯನ್ನು ಅನುಭವಿಸುವವನಾಗು."

ಸಹೋದರರೆಲ್ಲಾ ಕಾಶೀರಾಜ್ಯದಲ್ಲಿ ಕೆಲವು ದಿನಗಳಿದ್ದು, ತಮ್ಮನಿಂದ ಸಮುಸ್ತವಾದ ಮರ್ಯಾದೆಗಳನ್ನು ಹೊಂದಿ, ಆತನನ್ನು ಆಶೀರ್ವದಿಸಿ, ಸಂತೃಪ್ತಿಯಿಂದ ತಮ್ಮ ತಮ್ಮ ರಾಜ್ಯಕ್ಕೆ ಹೊರಟುಹೋದರು.






# ಎರಡು ಸಮಾಧಿಗಳು

ನೂರಾರು ವರ್ಷಗಳ ಹಿಂದೆ ಬಿದರ್ ಎಂಬ ಗ್ರಾಮದಲ್ಲಿ ಒಂದು ಸಣ್ಣ ಮಠವಿತ್ತು. ಆ ಮಠದಲ್ಲಿ ದಾದಾ ಎಂಬ ಭಕ್ತನೂ ಆತನ ಶಿಷ್ಯನೂ ಒಂದು ಸಣ್ಣ ಕತ್ತೆಯ ಮರಿಯೊಂದಿಗೆ ವಾಸಿಸುತ್ತಿದ್ದರು.

ಆ ದರಗಾ—ಅಂದರೆ ಸಾಹೇಬರ ಮಠ ಅಂತ—ಮಕ್ಕಾವಿಗೆ ಹೋಗುವ ಮಾರ್ಗ ಮಧ್ಯೆ ಇರುವುದರಿಂದ, ಮಕ್ಕಾ ಯಾತ್ರಿಕರೆಲ್ಲರೂ ಆ ದರಗಾ ಬಳಿಗೆ ಪ್ರವೇಶಿಸಿ, ಅವರವರ ಶಕ್ತ್ಯಾನುಸಾರ ಕಾಣಿಕೆ ಸಲ್ಲಿಸುತ್ತಿದ್ದರು. ಹಾಗೆ ಬಂದ ಕಾಣಿಕೆಯಿಂದ ಗುರು ಮತ್ತು ಶಿಷ್ಯರು ಸುಖವಾಗಿ ಜೀವಿಸುತ್ತಿದ್ದರು. ಆ ಮಠದಲ್ಲಿ ತನ್ನ ಗುರುಗಳು 'ಜೀವ ಸಮಾಧಿ' ಆದಂತೆ ಹೇಳಿ ಆತನನ್ನು ಕುರಿತು ದಾದಾ ಹಾಡುಗಳನ್ನು ಹಾಡಿ, ತತ್ವಗಳನ್ನು ಬೋಧಿಸುವನು. ತನ್ನ ಶಿಷ್ಯನಾದ ಹುಸ್ಸೇನ್‌ಗೂ ಸಹ ಅವುಗಳನ್ನು ಹೇಳಿಕೊಟ್ಟನು.

ಕೆಲಕಾಲಾನಂತರ ಹುಸ್ಸೇನ್‌ಗೆ ಒಂದು ಕೋರಿಕೆಯುಂಟಾಯ್ತು. ಗುರುಗಳ ಹತ್ತಿರಕ್ಕೆ ಹೋಗಿ "ಇಷ್ಟು ಜನ ಸಾಹೇಬರು ಮಕ್ಕಾಗೆ ಹೋಗಿ ಪುಣ್ಯ ಸಂಪಾದಿಸಿಕೊಂಡು ಬರುತ್ತಿದ್ದಾರೆ. ಮತ್ತೆ ನಾನೂ ಸಹ ಅಲ್ಲಿಗೆ ಹೋಗಿ ಬರುತ್ತೇನೆ ಗುರುಗಳೇ. ಅಪ್ಪಣೆ ಕೊಡಿ" ಎಂದ ಹುಸ್ಸೇನ್.

"ಸರಿ, ಮಗೂ, ನೀನು ಮಾಡಿದ ಸೇವೆಗೆ ನಾನು ಮೆಚ್ಚಿದೆ. ಫಕೀರನಾದುದರಿಂದ ನನ್ನ ಹತ್ತಿರ ಕೊಡಲು ಏನೂ ಇಲ್ಲ. ಆದರೂ ನಿನಗೆ ನಾನು ಕೊಡುವ ಬಹುಮಾನ ಒಂದಿದೆ. ಅದೇ ನಮ್ಮ ಕತ್ತೆಮರಿ. ಅದನ್ನು ಸಾಮಾನ್ಯವೆಂದು ತಿಳಿಯದೆ ಗುರುಗಳು ಕೊಟ್ಟ ಬಹುಮಾನವೆಂದು ಭಕ್ತಿಯಿಂದ ಸ್ವೀಕರಿಸಿ ತೆಗೆದುಕೊಂಡು ಹೋಗು" ಎಂದು ಹೇಳಿದ ದಾದಾ.

ಒಂದು ಸುಮುಹೂರ್ತ ನೋಡಿ, ದಾರಿಯಲ್ಲಿ ತಿನ್ನಲು ರೊಟ್ಟಿ ಇತ್ಯಾದಿಗಳನ್ನು ತೆಗೆದುಕೊಂಡು, ಕತ್ತೆ ಮರಿಯೊಂದಿಗೆ ಹುಸ್ಸೇನನು ಹೊರಟ. ಹತ್ತು ಹದಿನೈದು ಮಜಲುಗಳಾದ ನಂತರ ಒಂದು ದೊಡ್ಡ ಮರುಭೂಮಿ ದಾಟಬೇಕಾಗಿ ಬಂತು. ಕತ್ತೆಮರಿಗೆ ಎಂದೂ ಇಷ್ಟು

ಕೆ. ಗಿರಿಜ, ಉಡಿಪಿ




ದೂರ ನಡೆದು ಅಭ್ಯಾಸವಿಲ್ಲ. ಆದುದರಿಂದ ಅದು ಮುಂದಕ್ಕೆ ನಡೆಯಲಾರದೆ ಬಹಳ ತಾಪತ್ರಯಪಡುತಿತ್ತು.

ಗುರುಗಳು ಕೊಟ್ಟ ಬಹುಮಾನ ಅನ್ಯಾಯವಾಗಿ ಈ ರೀತಿ ತಾಪತ್ರಯ ಪಡುತ್ತಿರುವುದಲ್ಲಾ ಎಂದು ಮರುಕಗೊಂಡು, ಹುಸ್ಸೇನ್ ಕತ್ತೆ ಮರಿಯನ್ನು ಕೊರಳಮೇಲೆ ಹಾಕಿಕೊಂಡು ಮತ್ತೆ ಎರಡು ಮೂರು ಮಜಲು ದಾಟಿದ. ಆದರೆ ಕತ್ತೆಮರಿಗೆ ಸರಿಯಾದ ಮೇವು ಇಲ್ಲದೆ, ಬಿಸಿಲಿನ ಝಳಕ್ಕೆ ತಾಳಲಾರದೆ ಒಂದು ದಿನ ಸತ್ತುಹೋಯಿತು.

ಅದು ಸತ್ತರೂ ಗುರುಗಳು ಕೊಟ್ಟ ಬಹುಮಾನವೆಂಬ ಅಭಿಮಾನದಿಂದ ಆ ಶವವನ್ನು ಭುಜದಮೇಲೇರಿಸಿಕೊಂಡು, ಮೂರನೇಯ ದಿನ ಬೆಳಗಾಗುವ ವೇಳೆಗೆ ನೀರಿರುವ ಒಂದು ಖರ್ಜೂರದ ಮರಗಳಿದ್ದ ಸ್ಥಳ ಸೇರಿದ ಹುಸ್ಸೇನ್. ಶವ ನಾತಬಡಿಯುತ್ತಿತ್ತು. ಇನ್ನು ಪ್ರಯೋಜನವಿಲ್ಲವೆಂದು, ಒಂದು ಹಳ್ಳ ತೋಡಿ, ಕೆಳಗೆ ಕೆಲವು ಗರಿಗಳನ್ನು ಹರಡಿ, ಕತ್ತೆಯ ಶವವನ್ನು ಅದರಮೇಲಿಟ್ಟು, ಮತ್ತೆ ಖರ್ಜೂರದ ಗರಿಗಳನ್ನು ಹಾಕಿ, ಮರಳಿನಿಂದ ಅದನ್ನು ಮುಚ್ಚಿಬಿಟ್ಟ.

ಇಷ್ಟರಲ್ಲಿ ಆ ರಾಜ್ಯವನ್ನು ಆಳುವ ಸುಲ್ತಾನನ ಸಿಪಾಯಿಗಳು ಕೆಲವರು ಬಂದು "ಏನು ವಿಷಯ?" ಎಂದು ಕೇಳಿದರು. ಹುಸ್ಸೇನ್ ತಬ್ಬಿಬ್ಬಾಗಿ "ಅಯ್ಯಾ, ಇದು ನಮ್ಮ ಗುರುಗಳಾದ ದಾದಾಷಾ ಅವರ ಜೀವ ಸಮಾಧಿ. ಒಂದು ಗಂಟೆ ಕೆಳಗೆ ಅವರು ಸಮಾಧಿ ಹೊಂದಿದರು" ಎಂದು ನಡುಗುತ್ತಾ ನುಡಿದ. ಆಗ ಆ ಸೈನಿಕರು ಭಕ್ತಿಯಿಂದ ಸಮಾಧಿಗೆ ನಮಸ್ಕಾರ ಮಾಡಿ ಹೊರಟುಹೋದರು.

ಹುಸ್ಸೇನ್‌ಗೆ ಅಲ್ಲಿಯೇ ಇದ್ದರೇ ಉತ್ತಮವೆಂದು ತೋರಿತು. ನಾಲ್ಕು ಗಳಗಳನ್ನು ಸಂಪಾದಿಸಿ, ಸಣ್ಣ ಗುಡಿಸಲು ಹಾಕಿಸಿದ. ಬಂದು ಹೋಗುವವರಿಗೆ ಕಾಣಬರುವಂತೆ ಒಂದು ಕಪ್ಪು ಹಲಗೆಯಮೇಲೆ 'ದಾದಾಷಾರವರ ಜೀವಸಮಾಧಿ ಮಂದಿರ' ಎಂದು ಬರೆದು, ತತ್ವಗಳನ್ನು ಬೋಧಿಸುತ್ತಾ ಅಲ್ಲೇ ಜೀವಿಸುತ್ತಿದ್ದ.

ಹೀಗಿರಲು, ಕ್ರಮೇಣ ಪ್ರಯಾಣಿಕರು ಆ ಗುಡಿಸಲಿಗೆ ಬರುವುದೂ, ಕಾಣಿಕೆಗಳನ್ನು



ಸಮರ್ಪಿಸುವುದೂ ಸರ್ವೇ ಸಾಮಾನ್ಯ ವಾದವು. ಕೆಲ ದಿನಗಳಲ್ಲಿ ಹುಸ್ಸೇನ್ ಬಹಳ ಹಣ ಸೇರಿಸಿ, ಭಾರಿ ಭವನವನ್ನೇ ನಿರ್ಮಿಸಿದ. ಆ ಮರುಭೂಮಿಯಲ್ಲಿ! ಈ ರೀತಿ ದಾದಾ ಗುರುಗಳ ಕೀರ್ತಿ ಬಹುದೂರ ವ್ಯಾಪಿಸಿತು.

ಈ ಸಮಾಚಾರ ಬಿದರ್‌ನಲ್ಲಿದ್ದ ಆತನ ಗುರುವಾದ ದಾದಾ ಷಾ ಕಿವಿಗೆ ಬಿತ್ತು. ಆ ಮಹಾನುಭಾವನನ್ನು ನೋಡಬೇಕೆಂದು ಅಭಿಲಾಷೆಯಾಗಿ ದಾದಾ ಕೆಲವು ದಿನಗಳಾದ ಮೇಲೆ ಮರುಭೂಮಿಯಲ್ಲಿದ್ದ ಆ ಭವನವನ್ನು ಸೇರಿಕೊಂಡ. ಅಲ್ಲಿದ್ದ ಕುದುರೆಗಳನ್ನೂ, ಒಂಟೆಗಳನ್ನೂ, ಆ ಭವನವನ್ನೂ ನೋಡಿ ಆತನು ಬೆರಗಾದ. ಅಲ್ಲಿಂದ ಒಳಗೆ ಹೋಗಿ ನೋಡಿದರೆ ಆತನ ಕಣ್ಣಿಗೆ ಬಿದ್ದ ದೃಶ್ಯವೇನು ಗೊತ್ತೇ?" ಶಿಷ್ಯರ ನಡುವೆ ಸುಪ್ಪತ್ತಿಗೆಯ ಮೇಲೆ ನವಾಬರ ಠೀವಿಯಲ್ಲಿ ಕುಳಿತು ಹುಕ್ಕ ಸೇವಿಸುತ್ತಾ ಇದ್ದಾನೆ ಹುಸ್ಸೇನ್! ಈ ರೀತಿಯಿರುವ ತನ್ನ ಶಿಷ್ಯನನ್ನು ಕಂಡು ದಾದಾ ಚಕಿತನಾದ. ಹುಸ್ಸೇನ್ ದಾದಾನನ್ನು ನೋಡಿದಕೂಡಲೇ, ತನ್ನ ಶಿಷ್ಯರನ್ನೆಲ್ಲಾ ಹೊರಗೆ ಕಳುಹಿಸಿ, ಗುರುಗಳ ಕಾಲುಗಳ ಮೇಲೆ ಬಿದ್ದ.

"ಏನಪ್ಪಾ, ಇದೆಲ್ಲಾ?" ಎಂದ ದಾದಾ ಆತುರದಿಂದ.

"ಏನು ಹೇಳಲಿ ಗುರುಗಳೇ, ಇದೆಲ್ಲಾ ನಿಮ್ಮ ದಯೆ, ಆಶೀರ್ವಾದಫಲ. ನೀವು ಕೊಟ್ಟ ಕತ್ತೆಮರಿ ಸತ್ತುಹೋಯಿತು. ಅದನ್ನು ಇಲ್ಲೇ ಹೂಳಿರುವೆನು. ಅದನ್ನು ಹೂಳುತ್ತಿರಲು ತಟಕ್ಕನೆ ರಾಜಭಟರು ಬಂದರು. ಅವರನ್ನು ಕಂಡಕೂಡಲೇ ಭಯಪಟ್ಟು ತಟಾಲನೆ, ನಿಮ್ಮ ಹೆಸರು ಹೇಳಿಬಿಟ್ಟೆ. ಈಗ ನಿಮ್ಮ ಗುರುತು ಜನರಿಗೆ ಸಿಕ್ಕಿತೆಂದರೆ ನಮ್ಮಿಬ್ಬರ ಅವತಾರ ಮುಗಿದಂತೆಯೇ ಸರಿ" ಎಂದ ಹುಸ್ಸೇನ್.

ಅದಕ್ಕೆ ದಾದಾ "ಅಪ್ಪಾ. ನಾನು ಅಂದೇ ಹೇಳಲಿಲ್ಲವೇ—ಕತ್ತೆಮರಿಯಾದರೇನು ಎಂದಿಗಾದರೂ, ಯಾವುದಾದರೂ ಕೆಲಸಕ್ಕೆ ಬರುವುದೆಂದು—ಅಲ್ಲಿ ನಾನು ಪೂಜಿಸುತ್ತಿರುವ ಸಮಾಧಿ ಮಾತ್ರ ಏನೆಂದು ತಿಳಿದಿರುವೆ? ಅದು ಇದರ ತಾಯಿಯದು!" ಎಂದ. ಈ ಪರಮ ರಹಸ್ಯವನ್ನು ಅರಿತು ಹುಸ್ಸೇನ್ ದಂಗಾಗಿ ಬಹಳ ಹೊತ್ತು ನಿಂತುಬಿಟ್ಟ.




## 2

[ಕುಂಡಲಿನೀದ್ವೀಪದ ರಾಜನಾದ ಚಿತ್ರಸೇನನು ಕೀರ್ತಿ ಸಂಪಾದಿಸುವ ಹಂಬಲದಿಂದ ಪ್ರಜೆಗಳಮೇಲೆ ಹಾಕಿದ್ದ ಕಂದಾಯಗಳನ್ನು ಅರ್ಧಕ್ಕೆ ಇಳಿಸಿದನು. ಅದರಿಂದ ಖಜಾನೆ ಖಾಲಿ ಆಯಿತು. ಸೇನಾಧಿಕಾರಿಯ ಸಲಹೆಯಮೇರೆಗೆ ಧನ ದೋಚಿಕೊಂಡು ಬರಲು ಕುಂಡಲಿನೀ ಸೈನ್ಯವು ಸಮುದ್ರ ಪ್ರಯಾಣ ಹೊರಟವು. ಆ ಸಮಯದಲ್ಲಿ ದಕ್ಷಿಣ ದಿಕ್ಕಿನಲ್ಲಿ ಒಂದು ಧೂಮಕೇತು ಕಾಣಿಸಿತು.]

ಏನಾದರೇನು ಕುಂಡಲಿನೀ ರಾಜ್ಯದ ಸೈನಿಕರೊಂದಿಗೆ ಹೊರಟ ಹಡಗುಗಳು ತೀರವನ್ನು ಬಿಟ್ಟು ಸಮುದ್ರದ ಮೇಲೆ ಸಾಗುತ್ತಿದ್ದವು. ಆಗ ಸಮುದ್ರವು ಪ್ರಶಾಂತವಾಗಿತ್ತು; ತುಂಬಾ ಅನುಕೂಲವಾದ ಗಾಳಿಯೂ ಬೀಸುತಲಿತ್ತು.

ಸೈನಿಕರೆಲ್ಲರೂ ಸಂತೋಷವಾಗಿಯೇ ಇದ್ದರು. ಆದರೆ ಸೇನಾಧಿಪತಿಯಾದ ಸಮರಸೇನನು ಮಾತ್ರ ತನ್ನ ಹಡಗಿನ ಒಂದು ಮೂಲೆಯಲ್ಲಿ ಆಸನವನ್ನೇರ್ಪಡಿಸಿಕೊಂಡು ದಕ್ಷಿಣದಿಕ್ಕಿನಲ್ಲಿ ಮಿನುಗುಟ್ಟುತ್ತಿದ್ದ ಧೂಮಕೇತುವಿನ ಕಡೆಯೇ ನೋಡುತ್ತಿದ್ದ. ಈ ಮೊದಲು ಆಸ್ಥಾನ ದೈವಜ್ಞನು 'ಪ್ರಯಾಣ ಬೆಳೆಸಬೇಡಿ. ಅಶುಭ, ಅಶುಭ' ಎಂದು ಎಚ್ಚರಿಸಿದರೆ ಆ ಮಾತುಗಳು ಆತನ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಈಗ ಧೂಮಕೇತುವನ್ನು ನೋಡುತ್ತಿದ್ದರೆ ತುಂಬಾ ಭಯವಾಗುತ್ತಿದೆ.

ಕಲಡಿರುವ ಮನಸ್ಸಿನಿಂದ ನೋಡುತ್ತಿರಲು ಕಾರ್ಮೋಡಗಳು ಗಬಗಬನೆ ಬಂದು ಧೂಮಕೇತುವನ್ನು ಮುಚ್ಚಿಕೊಂಡವು. ಕಗ್ಗತ್ತಲು ಆವರಿಸಿತು. ಸಮುದ್ರ ಗರ್ಜಿಸುತ್ತಿದ್ದಿತು. ಸೈನಿಕರು ಭಯಕಂಪಿತರಾದರು.





ಹೇಳಿದ ಮಾತುಗಳನ್ನು ಎಲ್ಲರಿಗೂ ತಿಳಿಸಿದ. ಎಲ್ಲರೂ ತಮ್ಮ ಸೇನಾನಾಯಕನಲ್ಲೂ, ಕುಲ ದೇವತೆಯಾದ ಕುಂಡಲಿನೀದೇವಿಯಲ್ಲೂ ಸಂಪೂರ್ಣ ನಂಬಿಕೆಯಿರುವುದೆಂದು ತಲೆ ಯಾಡಿಸಿದರು.

ಆದರೆ ಬದಲಾವಣೆಯೇನೂ ಕಾಣಬರ ಲಿಲ್ಲ. ಇನ್ನೂ ಸಮುದ್ರ ಅಲ್ಲಕಲ್ಲೋಲ ವಾಗಿಯೇ ಇತ್ತು. ಆಕಾಶವೆಲ್ಲಾ ಕಾರ್ಮುಗಿಲುಗಳಿಂದ ತುಂಬಿತ್ತು. ಭಯಂಕರವಾದ ಬಿರುಗಾಳಿ ಬೇರೆ ಪ್ರಾರಂಭವಾಯಿತು.

ಇದನ್ನು ನೋಡಿ ಸೈನಿಕರ ಧೈರ್ಯ ಸಡ ಲಿತು. ಪ್ರತಿಯೊಬ್ಬರ ದೇಹವೂ ನಡುಗಿತು. ಆ ವಾಯುವೇಗಕ್ಕೆ ಹಡಗುಗಳು ಒಂದು ನಿರ್ದಿಷ್ಟವಾದ ದಾರಿ, ದಿಕ್ಕು ಇಲ್ಲದೆ ಸಿಕ್ಕಾ ಪಟ್ಟೆ ಚದುರಿಹೋದವು. ಈ ಸ್ಥಿತಿಯಲ್ಲಿ ಪ್ರತಿ ಯೊಬ್ಬರೂ ತಮಗೆ ಸಿಕ್ಕಿದ ಆಸರೆಯನ್ನು ಭದ್ರವಾಗಿ ಹಿಡಿದುಕೊಂಡು ಪ್ರಾಣರಕ್ಷಣೆ ಗಾಗಿ ತಾಪತ್ರಯ ಪಡುತ್ತಿದ್ದರು.

ರಾತ್ರಿಯಾದಂತೆ ಗಾಳಿ ಬಿರುಸಾಗುತಿತ್ತು. ನಾವಿಕರ ಸ್ವಾಧೀನ ತಪ್ಪಿದ ಆ ಹಡಗುಗಳು ಒಂದಕ್ಕೊಂದು ಢಿಕ್ಕಿ ಹೊಡೆದು ಚೂರುಚೂ ರಾಗುತ್ತಿದ್ದುವು. ಉಳಿದೆಲ್ಲ ಹಡಗುಗಳಿಗೆ ಏಟು ಬಿದ್ದರೂ ಸಮರಸೇನನು ಹತ್ತಿದ್ದ ಹಡಗು ಮಾತ್ರ ಬಹಳ ಭದ್ರವಾಗಿ ನಿರ್ಮಿಸಲ್ಪಟ್ಟದ್ದು ದರಿಂದ ಅಲೆಗಳಮೇಲೆ ತೇಲಿಕೊಂಡು ಹೋಗುತಿತ್ತೇ ಹೊರತು ಶಿಥಿಲವಾಗಲಿಲ್ಲ. ಸುರ್ಯೋದಯವಾದ ಹೊರತು ಎಷ್ಟು

ಸಮರಸೇನನು ಹಾಗೇ ನೋಡುತ್ತಾ ಕುಳಿತಿದ್ದ. ಅಷ್ಟರಲ್ಲಿ ನೌಕಾಧಿಪತಿ ಬಂದು 'ದಂಡನಾಯಕರೇ, ನಮ್ಮ ಸೈನಿಕರಲ್ಲಿ ಕೋಲಾಹಲವೆದ್ದಿದೆ. ಪ್ರತಿಯೊಬ್ಬರೂ ಎದುರುಬೀಳುತ್ತಿದ್ದಾರೆ' ಎಂದ.

ಕುಳಿತಿದ್ದ ಸ್ಥಳದಿಂದ ತಟ್ಟನೆ ಎದ್ದ ಸಮರ ಸೇನ! ಒಂದುಸಾರಿ ಆಕಾಶದತ್ತ ನೋಡಿದ, ಮತ್ತೊಂದುಸಾರಿ ಸಮುದ್ರದ ಕಡೆ ನೋಡಿದ.

'ಕುಂಡಲಿನೀದೇವಿ ಕರುಣಿಸಿದರೆ ಎಲ್ಲವೂ ಅನುಕೂಲವಾಗುವುದು. ಸಮರಸೇನನ ನಾಯಕತ್ವದಲ್ಲಿರುವ ಸೈನ್ಯಕ್ಕೆ ಎಂದಿಗೂ ಕೆಡಕು ಸಂಭವಿಸಲಾರದೆಂದು ಹೇಳಿ" ಎಂದು ಹೇಳಿದ. "ಅಪ್ಪಣೆ ನಾಯಕರೇ" ಎಂದು ನೌಕಾಧಿಪತಿ ಹೋಗಿ ಸಮರಸೇನನು





ಹಡಗುಗಳು ಮುಳುಗಿದವೋ, ಎಷ್ಟು ಜನ ಸತ್ತರೋ ತಿಳಿಯುವಂತಿಲ್ಲ. ಸಮರಸೇನನು ಮಾತ್ರ ಏನುತಾನೇ ಮಾಡುವನು? ತನ್ನ ಹಡಗಿನಲ್ಲಿದ್ದ ಕುಂಡಲಿನೀ ದೇವಿಯ ವಿಗ್ರಹದ ಮುಂದೆ ಮೊಣಕಾಲೂರಿ ಭಕ್ತಿಯಿಂದ ಪ್ರಾರ್ಥಿಸುತ್ತಿದ್ದ.

ಅಕಸ್ಮಾತ್ತಾಗಿ ಬಂದ ಗಾಳಿ ಮೋಡಗಳು ಇದ್ದಕ್ಕಿದ್ದಂತೆಯೇ ಮಾಯವಾದವು. ದೇವಿಯ ವಿಗ್ರಹದ ಮುಂದೆ ತಪೋನಿಷ್ಠೆಯಲ್ಲಿ ಕುಳಿತಿದ್ದ ಸಮರಸೇನನನ್ನು ಕುರಿತು ಸೈನಿಕರು ಕಾತುರದಿಂದ "ಗಡಿಬಿಡಿ ಕಡಿಮೆ ಆಯಿತು. ಸೂರ್ಯೋದಯವಾಯಿತು. ಒಂದುಬಾರಿ ತಮ್ಮ ದರ್ಶನ ಕೊಡಬೇಕು" ಎಂದರು.

ಭಾರವಾದ ಹೊರೆ ಇಳಿಸಿದಂತಾಯಿತು ಸಮರಸೇನನಿಗೆ. ಒಂದುಬಾರಿ ದೀರ್ಘವಾಗಿ ನಿಟ್ಟುಸಿರುಬಿಟ್ಟು, ಮೇಲಕ್ಕೆ ಬಂದ. ತನ್ನ ಹಡಗುಗಳು ಅರ್ಧಕ್ಕರ್ಧ ಸಮುದ್ರದ ಪಾಲಾಗಿದ್ದುವು. ಉಳಿದವಾದರೂ ಒಂದು ಕಡೆ ಇರಲಿಲ್ಲ. ಎರಡು ಮೂರು ಮೈಲು ಸುತ್ತಳತೆಯಲ್ಲಿ, ಅವು ತೇಲುತ್ತಾ ಇದ್ದವು.

ಸತ್ತವರು ಸಾಯಲು ಮುಳುಗಿದ ಹಡಗುಗಳು ಮುಳುಗಲು, ಉಳಿದಿರುವುದನ್ನಾದರೂ ಒಂದುಕಡೆ ಸೇರಿಸುವುದೇ ಮುಖ್ಯವಾದ ಕರ್ತವ್ಯವೆಂದು ಭಾವಿಸಿದ. ಕೂಡಲೇ ತನ್ನ ಹಡಗುಗಳಿಗೆ ಲಂಗರು ಹಾಕಿಸಿದ. ದೋಣಿಗಳಲ್ಲಿ ಮನುಷ್ಯರನ್ನು ಕಳುಹಿಸಿ, ದೂರದಲ್ಲಿದ್ದವರನ್ನೆಲ್ಲಾ ಹತ್ತಿರಕ್ಕೆ ಬರಮಾಡಿಕೊಂಡ.

ಸುದ್ದಿಹೋದ ಕೂಡಲೇ ಚದುರಿಹೋಗಿದ್ದ ಹಡಗುಗಳೆಲ್ಲಾ ಕ್ಷಣಮಾತ್ರದಲ್ಲಿ ಬಂದು ಸೇನಾನಿ ಇದ್ದ ಹಡಗಿನ ಸುತ್ತಲೂ ಸೇರಿಕೊಂಡವು. ಸೈನಿಕರೆಲ್ಲರೂ ಈ ಹಡಗುಗಳ ಮೇಲೆ ನಿಂತು ಸೇನಾನಿಗೆ ತಲೆಬಾಗಿಸಿದರು.

ಹಾಗೆ ನಿಂತವರಲ್ಲಿ ಪ್ರತಿಯೊಬ್ಬರೂ ರಾತ್ರಿ ಬಿರುಗಾಳಿಯ ಹೊಡೆತಕ್ಕೆ ಗುರಿಯಾಗಿ ನಾನಾ ಯಾತನೆಗಳನ್ನು ಅನುಭವಿಸಿ ಅದೃಷ್ಟವಶಾತ್ ಬದುಕಿ ಉಳಿದವರು! ಇನ್ನೇನು ಸಂಕಷ್ಟಗಳಿಗೆ ಗುರಿಯಾಗಬೇಕೋ ಎಂದು ಅವರ ಮನದಲ್ಲಿ ಹೆದರಿಕೆ ಇದ್ದೇ ಇತ್ತು.

ಪರಿಸ್ಥಿತಿಯನ್ನೆಲ್ಲಾ ಅರಿತುಕೊಂಡ ಸಮರಸೇನನು ರಾತ್ರಿ ಉಂಟಾದ ಕಲ್ಲೋಲಕ್ಕೆ ಸಮುದ್ರವೆಂದರೆ ಸೈನಿಕರು ಹೆದರುತ್ತಿದ್ದಾರೆ;



ಆದುದರಿಂದ ಹಾಗೇ ಸಮುದ್ರ ಪ್ರಯಾಣ ಮುಂದುವರೆಸುವುದು ತಿಳಿಗೇಡಿತನ. ತಾವೀಗ ಎಲ್ಲಿರುವರೋ ಅವರಿಗೆ ಸುತರಾಂ ತಿಳಿಯದು. ಕೂಡಲೇ ಒಬ್ಬನನ್ನು ಪಟಸ್ತಂಭ ಹತ್ತಿ ನೋಡುವಂತೆ ಆಜ್ಞಾಪಿಸಿದ.

ಸೇನಾನಿಯ ಆಜ್ಞೆಯಂತೆ ಒಬ್ಬನು ಪಟಸ್ತಂಭದ ತುದಿಗೆ ಹತ್ತಿದ. ಮಿಕ್ಕವರೆಲ್ಲರ ದೃಷ್ಟಿ ಆತನಮೇಲೆ ಕೇಂದ್ರೀಕೃತವಾಗಿತ್ತು. ಹಾಗೆ ಹತ್ತಿದಾತನು ಕೊಂಚಹೊತ್ತು ಎಲ್ಲ ದಿಕ್ಕುಗಳಲ್ಲೂ ನೋಡಿ 'ಹತ್ತಿರದಲ್ಲೆಲ್ಲೂ ಭೂಪ್ರದೇಶ ಕಾಣಿಸುತ್ತಿಲ್ಲ. ಆದರೆ ಪೂರ್ವದಿಕ್ಕಿನಲ್ಲಿ, ಬಹು ದೂರದಲ್ಲಿ ಪಕ್ಷಿಗಳು ಹಾರಾಡುತ್ತಿರುವಂತೆ ಗೋಚರಿಸುತ್ತಿದೆ' ಎಂದ.

ಈ ಮಾತು ಕಿವಿಗೆ ಬಿದ್ದಕೂಡಲೇ ಸಮರಸೇನನು "ಜೈ ಕುಂಡಲಿನೀ ದೇವಿಗೆ ಜೈ" ಎಂದು ಉತ್ಸಾಹದಿಂದ ಜಯಕಾರ ಮಾಡಿದ. ಆತನೊಂದಿಗೆ ಉಳಿದ ಸೈನಿಕರೆಲ್ಲ 'ಕುಂಡಲಿನೀ ದೇವಿಗೆ ಜೈ' ಎಂದು ಗಟ್ಟಿಯಾಗಿ ಜಯಜಯಕಾರಗಳನ್ನು ಮಾಡಿದರು.

ಪಕ್ಷಿಗಳು ಹಾರಾಡುತ್ತಿವೆ ಎಂದು ಕೇಳಿದ ಕೂಡಲೇ ರಕ್ಷಣೆಯು ಸಿಕ್ಕಿತೆಂದೇ ಭಾವಿಸಿ, ಸಂತೋಷಪಟ್ಟ ಸಮರಸೇನ. ಸಮರಸೇನನೊಂದಿಗೆ ಸೈನಿಕರೂ ಸಹ ಸಂತೋಷಗೊಂಡರು. ಧೈರ್ಯಗೊಂಡರು.

ಸೇನಾನಿಯ ಆಜ್ಞೆಯ ಪ್ರಕಾರ ಹಡಗುಗಳೆಲ್ಲ ಆ ಪಕ್ಷಿಗಳು ಹಾರಾಡುತ್ತಿದ್ದ ದಿಕ್ಕಿನ ಕಡೆ ಹೊರಟವು. ಪಟಸ್ತಂಭದಮೇಲೆ ಹತ್ತಿದ್ದ







ಸೈನಿಕನು ಹಡಗುಗಳಿಗೆ ದಾರಿ ತೋರಿಸುತಿದ್ದ. ಎಷ್ಟುದೂರ ಹೋದರೂ ಭೂಪ್ರದೇಶವು ಕಾಣಿಸದಿರಲು ಸೈನಿಕರಲ್ಲಿ ಮತ್ತೆ ನಿರಾಶೆ ಯುಂಟಾಯಿತು. ಇನ್ನೇನು ಸೂರ್ಯಾಸ್ತ ಮಾಯವಾಗುವುದೆನ್ನುವ ವೇಳೆಗೆ 'ಅಯ್ಯೋ ಇನ್ನು ಕೊಂಚ ಹೊತ್ತಿಗೆಲ್ಲಾ ಕತ್ತಲಾಗುವು ದಲ್ಲಾ, ಈ ಮಹಾಸಾಗರದಲ್ಲಿ ದಿಕ್ಕೂದಾರಿ ಕಾಣಿಸದೆ ಪರಿತಪಿಸಬೇಕಾಗುವುದಲ್ಲಾ' ಎಂದು ಎಲ್ಲರೂ ಭೀತಿಗೊಂಡರು.

ಅಂತಹ ಸಮಯದಲ್ಲಿ ಪಟಸ್ತಂಭದ ಮೇಲಿದ್ದ ಸೈನಿಕನು "ಅದೋ, ಅದೋ, ಭೂ ಪ್ರದೇಶ ಹತ್ತಿರದಲ್ಲೇ ಇದೆ" ಎಂದು ಧ್ವನಿ ದೊಡ್ಡದು ಮಾಡಿ ಹೇಳಿದ. ಆ ಮಾತು ಕೇಳಿ ಎಲ್ಲರೂ ಹರ್ಷಗೊಂಡರು.

ಹಡಗುಗಳೆಲ್ಲಾ ಅದೇ ದಿಕ್ಕಿನಲ್ಲಿ ಸಾಗುತ್ತಿದ್ದವು. ಅಷ್ಟರಲ್ಲಿ ಸೂರ್ಯಾಸ್ತಮಯ ವಾಯಿತು. ಅದಾಗುವ ವೇಳೆಗೆ ಹಡಗುಗಳೆಲ್ಲಾ ಒಂದು ಭೂಪ್ರದೇಶವನ್ನು ತಲುಪಿದವು. ಆ ಪ್ರದೇಶವು ಒಂದು ದ್ವೀಪವೆಂದು ಅವರಿಗೆ ತಿಳಿಯಿತು. ಭೂಮಿಯ ಮೇಲೆ ಅಡಿಯಿಡಲು ಪ್ರತಿಯೊಬ್ಬ ಸೈನಿಕನೂ ಕಾತುರನಾಗಿದ್ದನು. ಆದರೆ 'ಯಾರೂ ಹಡಗಿನಿಂದ ಇಳಿಯಕೂಡದು' ಎಂದು ಸಮರ ಸೇನನು ಆಜ್ಞೆಯಿತ್ತನು!

ಈಗ ಅವರು ಸೇರಿದ್ದು ಒಂದು ದ್ವೀಪ ವೆಂದು ಆಗಲೇ ಹೇಳಿರುವೆವು. ಅದು ಭಯಂಕರವಾದ ದ್ವೀಪ. ಸಮುದ್ರದೊಳಕ್ಕೆ ಚಾಚಿಕೊಂಡು ಬಂದ ಪರ್ವತಪಂಙ್ತಿಗಳಿಂದಲೂ, ಅವುಗಳಮೇಲೆ ಇಚ್ಛೆಬಂದಂತೆ ಬೆಳೆದಿದ್ದ ಮಹಾವೃಕ್ಷಗಳಿಂದಲೂ, ವಿಸ್ಮಯ ಕರವಾದ ಕಾಡುಮೃಗಗಳಿಂದಲೂ ಆವರಿಸಿದ್ದ ಆ ಹೊಸ ಪ್ರದೇಶ ಎಂತಹದೋ ಮೊದಲು ತಿಳಿದುಕೊಳ್ಳದೆ ಸೈನಿಕರು ಕೆಳಗೆ ಇಳಿಯುವುದು ಪ್ರಮಾದಕರವಾದುದೆಂದು, ಆ ರೀತಿ ಸಮರಸೇನನು ಆಜ್ಞೆಮಾಡಿದನು.

ತನ್ನ ಸೈನ್ಯವನ್ನು ಇಬ್ಭಾಗ ಮಾಡಿ ಅದ ರಲ್ಲಿ ಕೆಲವರನ್ನು ಸಣ್ಣ ಸಣ್ಣ ದೋಣಿಗಳಲ್ಲಿ ಆ ದ್ವೀಪದ ತೀರಕ್ಕೆ ಕಳುಹಿಸುವುದು ಉತ್ತಮವೆಂದು ಆತನಿಗೆ ತೋರಿತು. ಅವರು ಹೋಗಿ ಅಲ್ಲಿನ ಒಳಿತುಕೆಡಕುಗಳನ್ನು ತಿಳಿದು ಕೊಂಡು ಬಂದಮೇಲೆ ಮಿಕ್ಕವರು ಹೋಗ







ಬಹುದೆಂಬುದು ಆತನ ಉದ್ದೇಶ. ಆದರೆ ಮೊದಲು ಆ ಪ್ರದೇಶಕ್ಕೆ ಹೋಗಿಬರಲು ಎದೆಗಾರಿಕೆ ಇರುವ ಸೈನಿಕರು ಯಾರು? ಇದೊಂದು ಸಮಸ್ಯೆ. ಅಷ್ಟೇ ಅಲ್ಲದೆ ಹೊಸ ಪ್ರದೇಶಕ್ಕೆ ಹೋಗಿ ವಿಷಯವನ್ನು ಅರಿತು ಕೊಳ್ಳಬೇಕೆಂದರೆ ಬರೀ ಧೈರ್ಯಸಾಹಸಗಳು ಸಾಲವು, ಸಮಯೋಚಿತವಾದ ಯೋಚನೆ, ಯುಕ್ತಿಗಳೂ ಬೇಕು.

ಬಹಳ ಹೊತ್ತು ಆಲೋಚಿಸಿ ಕೊನೆಗೆ ತಾನೇ ಹೋಗಿಬರುವುದು ಉತ್ತಮವೆಂದು ತೋರಿತು ಸಮರಸೇನನಿಗೆ. ಆದುದರಿಂದ ಅನುಭವಸ್ಥರಾದ ಆರು ಜನ ಸೈನಿಕರನ್ನು ಆರಿಸಿ, ಸಂಗಡ ಕರೆದುಕೊಂಡು ಆ ನೂತನ ದ್ವೀಪಕ್ಕೆ ಹೊರಟ. ಸಮರಸೇನನೂ, ಆರು



ಜನ ಯೋಧರೂ ಸಣ್ಣ ದೋಣಿಗಳನ್ನು ಹತ್ತಿ ಹೊರಟು ,ಸ್ವಲ್ಪ ಹೊತ್ತಿಗೆಲ್ಲಾ ಆ ದ್ವೀಪದ ತೀರವನ್ನು ಸೇರಿದರು.

ತೀರಪ್ರಾಂತವೆಲ್ಲಾ ನಿರ್ಜನವಾಗಿತ್ತು. ಎಲ್ಲಿಯೂ ಮಾನವನು ಓಡಾಡಿದ ಸುಳಿವೇ ಇಲ್ಲ. ಅಷ್ಟಕ್ಕೇ ಸಮರಸೇನನು ಮೋಸ ಹೋಗಲಿಲ್ಲ. ಆಯುಧ ಹಿಡಿದು ಸಿದ್ಧವಾಗಿದ್ದ. 'ಯಾವ ಗಿಡದ ಹಿಂದಿನಿಂದಲೋ ಹಠಾತ್ತನೆ ಬರಲೂಬಹುದು' ಎಂದು ಮುಂಜಾಗ್ರತೆ ಯಿಂದಿದ್ದ ಸಮರಸೇನ.

ಸಂಶಯದಿಂದ, ಮೆಲ್ಲನೆ ಮುಂದೆ ಹೆಜ್ಜೆ ಯಿಡುತ್ತಾ ಹೋಗುತ್ತಿರಲು ಆತನಿಗೆ ಭಯಂಕರವಾದ ಗರ್ಜನೆ ಕೇಳಿಸಿತು.

"ಸೇನಾನೀ, ಈ ಗರ್ಜನೆ ಅಸಾಮಾನ್ಯವಾಗಿದೆ. ಇಂತಹ ವಿಕೃತವಾದ, ಬೀಭತ್ಸವಾದ ಘರ್ಜನೆಯನ್ನು ನಮ್ಮ ಜೀವಮಾನದಲ್ಲೇ ಕೇಳರಿಯೆವು" ಎಂದರು, ಭಯದಿಂದ ಕಂಪಿಸುತ್ತಾ ಆ ಆರುಜನ ಯೋಧರು!

ಆದರೂ ಮುಂದಕ್ಕೆ ನಡೆದ ಸೇನಾನಿ. ಆಯುಧಪಾಣಿಗಳಾದ ಯೋಧರು ಆತನನ್ನು ಹಿಂಬಾಲಿಸುತ್ತಲೇ ಇದ್ದರು. ತುಸ ಹೊತ್ತಿಗೆ ಅವರು ಮರಗಳ ಮಧ್ಯೆ ಸೇರಿಕೊಂಡರು. ಅವರ ಮುಂದೆ ಇದ್ದ ದೊಡ್ಡ ಕೊಳದ ಕಡೆ ಅವರ ದೃಷ್ಟಿ ಹರಿಯಿತು.

ಅಲ್ಲಿನ ದೃಶ್ಯವನ್ನು ಕಂಡು ಅವರು ನಿಶ್ಚೇಷ್ಟಿತರಾದರು. ಏನದು? ಅವರು ಎಣಿಸಿದ್ದಂತೆ ವಿಸ್ಮಯಕರವಾದ ಜಂತುಗಳ ಭೀಕರ ಹೋ



ರಾಟ. ವಿಚಿತ್ರವಾದ ಅನೇಕ ಮೃಗಗಳು ಸುತ್ತಮುತ್ತಲಿಂದ ಬಂದು ಆ ಹೋರಾಟವನ್ನು ನೋಡುತ್ತಿದ್ದವು. ಹತ್ತಿರದಲ್ಲಿದ್ದ ಮರದ ಕೊಂಬೆಗಳ ಮೇಲೆ ಮನುಷ್ಯಾಕಾರದಲ್ಲಿದ್ದ ದೊಡ್ಡದೊಡ್ಡ ನರವಾನರಗಳು ಆ ಕಾದಾಟವನ್ನು ನೋಡುತ್ತಾ, ತಮ್ಮತಮ್ಮಲ್ಲಿ ಸಂಭಾಷಿಸುತ್ತಿದ್ದವು. ಶಿಲೆಗಳಿಂದ ತಯಾರಾದ ಆಯುಧಗಳನ್ನು ಅವು ಕೈಯಲ್ಲಿ ಹಿಡಿದಿದ್ದವು.

ಸಮರಸೇನನು ತನ್ನ ಸಂಗಡಿಗರೊಂದಿಗೆ ಹೀಗೆಂದು ಹೇಳಿದ. "ನಿಜವಾಗಿ ಇವೆಲ್ಲಾ ವಿಚಿತ್ರ ಮೃಗಗಳೇ! ಆ ಮರಗಳ ಮೇಲಿರುವುವು ನರರೂ ಅಲ್ಲ, ವಾನರಗಳೂ ಅಲ್ಲ. ಶಿಲಾಯುಗದ ಮಾನವರನ್ನು ನಾವೀಗ ನೋಡುತ್ತಿರುವೆವು. ಈ ಜಂತುಗಳು ಲಕ್ಷಾಂತರ ವರ್ಷಗಳ ಹಿಂದಿನವು"

ಸೈನಿಕರಿಗೆ ಏನುಹೇಳಲೂ ತೋರಲಿಲ್ಲ. ಇಂತಹ ಭಯಂಕರವಾದ ದ್ವೀಪದಿಂದ ದೋಚಿಕೊಂಡು ಹೋಗಲು ಧನರಾಶಿ ಇದ್ದರಷ್ಟೇ? ಸಮರಸೇನನಿಗೂ ಇದೇ ಯೋಚನೆ. ಕುಂಡಲಿನೀ ರಾಜ್ಯದ ಧನಾಗಾರವನ್ನು ತುಂಬಲು ಪರ ರಾಜ್ಯಗಳನ್ನು ಕೊಳ್ಳೆ ಹೊಡೆಯುವ ಸಲುವಾಗಿ ಸಾಗಿದ್ದಾನೆ ತಾನು! ಆದರೆ ಅದಕ್ಕೆ ಬದಲಾಗಿ ಈ ವಿಚಿತ್ರವಾದ ಭಯಂಕರವಾದ ದ್ವೀಪ ಸಿಕ್ಕಿದೆ. ಮುಂದಿನ ಕರ್ತವ್ಯವೇನು?

ಹೀಗೆ ಆತನು ಆಲೋಚಿಸುತ್ತಿರಲು, ಆ ವಿಚಿತ್ರ ಜಂತುಗಳ ಹೋರಾಟವು ಮತ್ತಷ್ಟು ಭೀಕರರೂಪ ತಾಳುತಿತ್ತು. ಸುತ್ತಮುತ್ತಲಿದ್ದ ಮರಗಳ ಹಿಂದಿನಿಂದ ಆನೆಗಳು ಘೀಂಕಾರ ಮಾಡುತ್ತಾ ದೂರದೂರವಾಗಿ ಓಡಹತ್ತಿದವು. ಅವುಗಳಲ್ಲಿ ಐರಾವತದಂತಹ ಒಂದು ಆನೆ ಸಮರಸೇನನು ಅವಿತಿದ್ದ ಕಡೆಗೆ ಗಬಗಬನೆ ಓಡಿಬರುತಿತ್ತು.

ಸೈನಿಕರಿಗೆ ಎಚ್ಚರಿಕೆಯಿತ್ತು ಸಮರಸೇನನು ಒಂದು ಮರವನ್ನೇರಿದನು. ಅದೇ ಸಮಯಕ್ಕೆ ಎರಡು ಸಿಂಹಗಳು ಆ ಆನೆಯ ಕಡೆ ರಭಸದಿಂದ ನುಗ್ಗಿದವು.

[ಇನ್ನೂ ಇದೆ]



# ಜಿದ್ದು



ಸಿರಿಪುರಕ್ಕೆ ಪ್ರದೀಪ ಎಂಬಾತನು ರಾಜ. ಪ್ರದೀಪನ ಆಸ್ಥಾನದಲ್ಲಿ ರಾಜನಿಗಿಂತಲೂ ಹೆಚ್ಚು ಪ್ರಭಾವಶಾಲಿ ರಾಜಗುರು. ರಾಜಗುರುವಿನ ಮಾತಿಗೆ ಪ್ರದೀಪನು ಎಂದೂ ಪ್ರತಿ ಹೇಳುತ್ತಿರಲಿಲ್ಲ.

ಏಕೆಂದರೆ ಆ ರಾಜಗುರು ಮತ್ತಿತರ ಸಾಮಾನ್ಯ ಪುರೋಹಿತರಂತೆ ಅಲ್ಲ. ಮಹಾ ತಪಸ್ವಿ. ಸಂಜೀವಿನಿವಿದ್ಯೆಯನ್ನು ಸಾಧಿಸಿ, ಸಿದ್ಧಿಪಡೆದಾತ. ಇಂತಹ ಮಹಿಮೆಯುಳ್ಳವನಾದುದರಿಂದಲೇ ರಾಜಗುರುವನ್ನು ಕಂಡರೆ ಪ್ರದೀಪನು ಬಹು ವಿನಯವಿಧೇಯತೆಯಿಂದ ನಡೆದುಕೊಳ್ಳುತ್ತಿದ್ದ. ಹಾಗೇ ಇತರ ಸಾಮಂತರಾಜರೂ ತಲೆಬಾಗುತ್ತಿದ್ದರು.

ಪ್ರದೀಪನಿಗೆ ಒಬ್ಬಳೇ ಮಗಳು. ಆಕೆಯ ಹೆಸರು ಸುಧೀಮಣಿ. ರಾಜಗುರುವಿಗೂ ಒಬ್ಬ ಮಗಳಿದ್ದಳು. ಆಕೆಯ ಹೆಸರು ಸೌಮ್ಯ ಎಂಬುದಾಗಿತ್ತು. ಆ ಬಾಲೆಯರಿಬ್ಬರೂ ಸಮವಯಸ್ಕರು. ಒಂದೇ ತಟ್ಟೆಯಲ್ಲಿ ತಿಂದು, ಒಂದು ಮಂಚದಲ್ಲಿ ಮಲಗೇಳುತ್ತಿದ್ದ ಗೆಳತಿಯರು. ಯಾವಾಗಲೂ ಅವರು ಒಬ್ಬರನ್ನು ಬಿಟ್ಟು ಇನ್ನೊಬ್ಬರು ಇರುತ್ತಲೇ ಇರಲಿಲ್ಲ.

ಇಂತಹ ಗೆಳತಿಯರು ಒಂದು ದಿನ ಉದ್ಯಾನದಲ್ಲಿದ್ದ ಕೊಳದಲ್ಲಿ ಜಲಕ್ರೀಡೆಗಾಗಿ ಹೋದರು. ತಮ್ಮ ಉಡುಪುಗಳನ್ನು ಕಳಚಿ, ಕಟ್ಟೆಯಮೇಲಿಟ್ಟು ನೀರಿಗೆ ಇಳಿದರು. ಅವರು ನೀರಿನಲ್ಲಿ ಇಳಿದ ಕೊಂಚ ಹೊತ್ತಿಗೆಲ್ಲಾ ಬಿರುಗಾಳಿ ಬೀಸಿತು. ಅವರ ಉಡುಪುಗಳೆಲ್ಲಾ ತಾರುಮಾರಾಯಿತು. ಬಲವಾದ ಗಾಳಿ ಬೀಸಿದುದರಿಂದ ಅವರು ಕೂಡಲೇ ಜಲಕ್ರೀಡೆಯನ್ನು ಮುಕ್ತಾಯಗೊಳಿಸಿ ಕಟ್ಟೆಯ ಮೇಲಕ್ಕೆ ಬಂದರು. ಮೊದಲು ಬಂದ ರಾಜಕುಮಾರಿ ಅವಸರದಲ್ಲಿ ಸೌಮ್ಯಳ ಸೀರೆಯನ್ನು ಕಟ್ಟಿಕೊಂಡಳು.

ಅದನ್ನು ಕಂಡು ಸೌಮ್ಯ ‘ಅಕ್ಕಾ, ನೀನು ಉಟ್ಟುಕೊಂಡಿರುವುದು ನನ್ನ ಸೀರೆ ಕಣೇ’ ಎಂದಳು. ಇದನ್ನು ಕೇಳಿ ರಾಜಕುಮಾರಿ ಮುಖ ಸಿಂಡರಿಸಿ ‘ನನ್ನ ಸೀರೆಯಂತೆ ನನ್ನ ಸೀರೆ. ಎಲ್ಲಾ ನಮ್ಮ ಒಡವೇತಾನೇ” ಎಂದು

ಸಿ. ಗುರುಮೂರ್ತಿ, ಬೆಂಗಳೂರು



ಧಿಮಾಕಿನಿಂದ ನುಡಿದಳು. ಈ ಚುಚ್ಚು ಮಾತು ಸಹಿಸಲಾರದೆ ಸೌಮ್ಯ ಸ್ವಲ್ಪ ಕಠಿನವಾಗಿ ಬದಲುಹೇಳಿದಳು.

ಸೌಮ್ಯ ಆ ರೀತಿ ಎದುರು ಮಾತನಾಡಲು ರಾಜಕುಮಾರಿಗೆ ರಾಜಸ ಹೆಚ್ಚಾಯಿತು. "ನಮ್ಮ ಮನೆಯ ಅನ್ನ ಉಂಡು, ನಮ್ಮನ್ನೇ ಅವಹೇಳನಮಾಡುವೆಯಾ? ಏನು, ಕಣ್ಣು ನೆತ್ತಿಗೇರಿತೋ ಹೇಗೆ?" ಎಂದು ಸುಧೀಮಣಿ, ಸೌಮ್ಯಳನ್ನು ಚೆನ್ನಾಗಿ ಹೊಡೆದು, ಪಕ್ಕದಲ್ಲಿದ್ದ ಹಾಳುಬಾವಿಯಲ್ಲಿ ತಳ್ಳಿ, ತನ್ನಪಾಡಿಗೆ ತಾನು ಅರಮನೆಗೆ ಹಿಂತಿರುಗಿದಳು. ಈ ಪ್ರಸಂಗ ರಾಜನಿಗಾಗಲೀ, ಮಂತ್ರಿಗಳಿಗಾಗಲೀ ತಿಳಿಯದು. ಪಾಪ ಸೌಮ್ಯ ಆ ಹಾಳುಭಾವಿಯಲ್ಲೇ ಬಿದ್ದಿದ್ದಳು.



ಹೀಗೆ ಇರಲು ಬೇಟೆಯಾಡಟು ಮಾಳವ ರಾಜಕುಮಾರನು ಆ ಪ್ರದೇಶಕ್ಕೆ ಬಂದನು. ಹಾಳು ಬಾವಿಯಿಂದ ಮಾನವಕಂಠ ಧ್ವನಿ ಕೇಳಿಬರಲು ಆತನು ಅಲ್ಲಿಗೆ ಹೋಗಿ ನೋಡಿದನು. ಕೂಡಲೇ ಸೌಮ್ಯಳನ್ನು ಹೊರಗೆತ್ತಿ ಕುಶಲಪ್ರಶ್ನೆ ಮಾಡಿದನು. ಆಕೆ ರಾಜಗುರುವಿನ ಪುತ್ರಿಯೆಂದು ತಿಳಿದು ಆತನು ಬಹಳ ನೊಂದುಕೊಂಡನು.

ಸೌಮ್ಯ ತನ್ನ ವಿಷಯವನ್ನೆಲ್ಲಾ ಆತನಿಗೆ ತಿಳಿಸಿ, ತನ್ನನ್ನು ರಾಣಿಯನ್ನಾಗಿ ಮಾಡಿಕೊಳ್ಳುವಂತೆ ಆತನನ್ನು ಬೇಡಿಕೊಂಡಳು. ಸೌಮ್ಯ ಆತನನ್ನು ಆಕರ್ಷಿಸಿದ್ದೇನೋ ಉಂಟು; ಆದರೆ ಆಕೆಯ ಈ ಕೋರಿಕೆಯನ್ನು ಈಡೇರಿಸಲು ಆತನು ಸಿದ್ಧನಿರಲಿಲ್ಲ. ಏಕೆಂದರೆ ಸಂಜೀವಿನಿ ಮಹಿಮೆಯನ್ನು ತಿಳಿದ ಸಿದ್ಧಪುರುಷ ಆಕೆಯ ತಂದೆ. ಮರು ಮಾತನಾಡದೆ ಹಿಂತಿರುಗಿ ಹೊರಟು ಹೋಗಿಬಿಟ್ಟ.

ಪರಿಸ್ಥಿತಿ ಪ್ರತಿಕೂಲವಾದುದನ್ನು ನೋಡಿ ನಿರಾಶೆಯುಂಟಾದ ಸೌಮ್ಯ ಒಂದು ಮರದ ಕೆಳಗೆ ಕುಳಿತುಕೊಂಡು ಅಳತೊಡಗಿದಳು.

ಇಷ್ಟರಲ್ಲಿ ರಾಜಗುರು ತನ್ನ ಮಗಳು ಕಾಣೆಯಾಗಿ ಉದ್ವಿಗ್ನನಾಗಿ ರಾಜನ ಹತ್ತಿರಕ್ಕೆ ಹೋದ. ರಾಜನಿಗೂ ಇದು ಅಗಮ್ಯವಾಗಿಯೇ ತೋರಿತು. ಕೂಡಲೇ ಭಟರನ್ನೂ ಪರಿಚಾರಕರನ್ನೂ ಕಳುಹಿಸಿ ಗುರುಪುತ್ರಿಯನ್ನು ಹುಡುಕಿ ತರುವಂತೆ ಆಜ್ಞಾಪಿಸಿದ ಪ್ರದೀಪ. ಅವರು ಹೋಗಿ ಎಲ್ಲೆಲ್ಲೋ ಹುಡುಕಿದರು. ಕಡೆಗೆ



ಒಂದು ಮರದ ಕೆಳಗೆ ವಿಲಪಿಸುತಿದ್ದ ಸೌಮ್ಯ ಕೆಲವು ಪರಿಚಾರಿಕೆಯರಿಗೆ ಕಾಣಿಸಿದಳು. ಆದರೆ ಅವರೆಷ್ಟು ಬೇಡಿಕೊಂಡರೂ ಮನೆಗೆ ಬರುವುದಿಲ್ಲವೆಂದು ಹಠಹಿಡಿದಳು.

ಈ ವಿಷಯ ಬಂದು ಹೇಳಲು ರಾಜಗುರು ಕಿಡಿಕಿಡಿಯಾದ. ರಾಜ ದಿಗ್ಭ್ರಾಂತನಾದ. ತಕ್ಷಣ ಇಬ್ಬರೂ ಪಾದಚಾರಿಗಳಾಗಿ ಆ ಮರದ ಹತ್ತಿರಕ್ಕೆ ಹೋಗಿ ಸೌಮ್ಯಳಿಂದ ವಿಷಯವನ್ನೆಲ್ಲಾ ಅರಿತರು.

ರಾಜನ ಕಳವಳಕ್ಕೆ ಕೊನೆಮೊದಲಿಲ್ಲ. ಗುರುಗಳ ಪಾದಗಳಿಗೆರಗಿ "ಮಹಾತ್ಮಾ, ಇದು ನನ್ನ ಅಪರಾಧ. ನನ್ನನ್ನು ಅನುಗ್ರಹಿಸಿ ನನ್ನ ಬಾಲೆಯನ್ನು ಕ್ಷಮಿಸಿ. ದಾಸಾನು ದಾಸನು..." ಎಂದು ಪರಿಪರಿ ವಿಧದಲ್ಲಿ ಬೇಡಿಕೊಂಡ.

ಆಗ ರಾಜಗುರು ತನ್ನ ಮಗಳನ್ನು ಮನೆಗೆ ಬರುವಂತೆ ಕೇಳಲು, ಆಕೆ ಎರಡು ಷರತ್ತುಗಳನ್ನು ಹಾಕಿದಳು. ಮೊದಲನೆಯದು ತಾನು ಮೌಸಲ ರಾಜಪುತ್ರನ ರಾಣಿಯಾಗಬೇಕು; ಎರಡನೆಯದು, ರಾಜಕುಮಾರಿಯಾದ ಸುಧೀಮಣಿ ತನ್ನೊಂದಿಗೆ ಚೇಟಿಯಾಗಿ ಬರಬೇಕು.

ರಾಜನು ತನ್ನಿಂದ ಆಗುವ ಯಾವ ಕೆಲಸವನ್ನೂ ಮಾಡಲು ಸಿದ್ಧನಿರುವೆನೆಂದು ವಾಗ್ದಾನಮಾಡಿದನು. ತಂದೆ ಅನುಮತಿ ಕೊಡಲು ಸೌಮ್ಯ ರಾಜಪುತ್ರನನ್ನು ವಿವಾಹವಾದಳು. ಆಕೆಯೊಂದಿಗೆ ಸುಧೀಮಣಿ ಸಖಿ




ಯಾಗಿ ಹೋಗಲೇಬೇಕಾಯಿತು. ಈಗ ಸೌಮ್ಯಳ ಅಂಕೆಯಲ್ಲಿದ್ದ ಸುಧೀಮಣಿ, ಇಷ್ಟವಿದ್ದರೂ, ಇಲ್ಲದಿದ್ದರೂ ಆಕೆ ಹೇಳಿದ ಕೆಲಸ ಕಾರ್ಯಗಳನ್ನು ಮಾಡಬೇಕಾಯಿತು. ಸುಧೀಮಣಿ ಈ ರೀತಿ ಒತ್ತಡದಿಂದ ಕಾಲಕಳೆಯಬೇಕಾಯಿತು.

ಕೆಲಕಾಲವಾದನಂತರ ಸೌಮ್ಯ ಮಗನನ್ನು ಹೆತ್ತಳು. ಮಗನು ಹುಟ್ಟಿದಾರಭ್ಯ ಸೌಮ್ಯ ಸುಧೀಮಣಿಗೆ ಕಿರುಕುಳ ಕೊಡುವುದು ಮತ್ತಷ್ಟು ಹೆಚ್ಚಾಯಿತು. ಇದನ್ನು ಕಂಡು ರಾಜಪುತ್ರನು ತುಂಬಾ ಪರಿತಾಪಪಡುತ್ತಿದ್ದನು. ಸುಧೀಮಣಿಯನ್ನು ಈ ಸಂದಿಗ್ಧದಿಂದ ಬಿಡಿಸಲು ರಾಜಪುತ್ರನು ನಿರ್ಧರಿಸಿದನು. ಈ ಸಂಕಲ್ಪದಿಂದ ರಾಜಪುತ್ರನು





ಸುಧೀಮಣಿಯನ್ನು ಒಪ್ಪಿಸಿ, ದೂರ ಪ್ರದೇಶಕ್ಕೆ ಆಕೆಯನ್ನು ಕರೆದೊಯ್ದು ವಿವಾಹ ಮಾಡಿಕೊಂಡನು.

ಈ ವಿಷಯ ಹೇಗೋ ಸೌಮ್ಯಳಿಗೆ ತಿಳಿದು ಹೋಯಿತು. ಆಕೆ ತಂದೆಯ ಬಳಿಗೆ ಹೋಗಿ ಗೋಳಿಟ್ಟಳು. ತಂದೆಯಾದ ರಾಜಗುರು ಕುಪಿತನಾಗಿ 'ರಾಜಪುತ್ರನು ವೃದ್ಧನಾಗಿ ಬದಲಾಯಿಸಲಿ' ಎಂದು ಶಾಪವಿತ್ತನು. ಶಾಪ ತಗಲಿದ ತಕ್ಷಣ ಮೌಸಲರಾಜಪುತ್ರನು ವೃದ್ಧನಾಗಿ ಬದಲಾಯಿಸಿದನು.

ಹೀಗೆ ಬದಲಾಯಿಸಿದ ರಾಜಪುತ್ರನು ತನ್ನ ಮಾವನಾದ ರಾಜಗುರುವಿನ ಹತ್ತಿರ ಹೋಗಿ ವಿಷಯವನ್ನೆಲ್ಲಾ ವಿವರಿಸಿ ಹೇಳಿ, ನ್ಯಾಯವನ್ನು ಪಾಲಿಸಬೇಕೆಂದು ಪ್ರಾರ್ಥಿಸಿದನು. ಕ್ಷಣಕಾಲ ಯೋಚಿಸಿ ರಾಜಗುರು "ಅಪ್ಪಾ, ಯಾರಾದರೂ ನಿನ್ನ ವೃದ್ಧಾಪ್ಯವನ್ನು ತೆಗೆದುಕೊಳ್ಳಲು ಬಯಸಿದರೆ ಆಗಬಹುದು" ಎಂದ. ಮುದಿತನ ಪಡೆಯುವವರು ಯಾರೂ ಇರಲಾರರೆಂಬ ಭರವಸೆಯಿಂದಲೇ ಆತ ಹಾಗೆ ಹೇಳಿದನು.

ಯಾರೂ ವಾರ್ಧಕ್ಯವನ್ನು ಸ್ವೀಕರಿಸಲು ಇಷ್ಟಪಡಲಿಲ್ಲ. ರಾಜಪುತ್ರನು ಈ ಚಿಂತೆಯಲ್ಲಿರುವಾಗ ಆತನ ಮಗನು ಯಾರಿಗೂ ತಿಳಿಯದಂತೆ ವೃದ್ಧಾಪ್ಯವು ತನಗೆ ಬರಲೆಂದು ಕೋರಿಕೊಂಡ.

ಅಕಸ್ಮಾತ್ತಾಗಿ ತನ್ನ ರೂಪ ಬದಲಾವಣೆ ಹೊಂದಿರುವುದನ್ನು ಕಂಡು ರಾಜಪುತ್ರನು ವಿಸ್ಮಯಗೊಂಡ. ಹೀಗಾಗಲು ಕಾರಣವೇನೆಂದು ಪರಿಶೀಲಿಸಿ ನೋಡಲು ವೃದ್ಧನ ರೂಪವನ್ನು ಹೊಂದಿದ ಆತನ ಕುಮಾರನು ಎದುರುಬಿದ್ದನು. ಆಗ ತಂದೆಯಾದ ಮೌಸಲ ರಾಜಪುತ್ರನ ಸಂಕಟ ಹೇಳತೀರದು.

ಇದೆಲ್ಲಾ ರಾಜಗುರುವಿಗೆ ತಿಳಿಯಿತು. ಮಮತೆಯ ಮೊಮ್ಮಗನನ್ನು ಆ ರೂಪದಲ್ಲಿ ನೋಡಿ ಯಾವ ಅಜ್ಜನು ಸುಮ್ಮನಿರುತ್ತಾನೆ? ಮೊಮ್ಮಗನ ತ್ಯಾಗವನ್ನು ಮೆಚ್ಚಿ ಕೂಡಲೇ ತನ್ನ ಶಾಪವನ್ನು ಉಪಸಂಹಾರ ಮಾಡಿಕೊಂಡನು. ಅಂದಿನಿಂದ ಸೌಮ್ಯ ಸುಧೀಮಣಿಯರು ಚಿಕ್ಕಂದಿನಲ್ಲಿದ್ದಂತೆಯೇ ಕಲೆತುಮೆಲತು ಸುಖವಾಗಿದ್ದರು.



# ಶಾಲೆಯಲ್ಲಿ ನನ್ನ ತಂಟೆ

* ಜಿ. ವೆಂಕಪ್ಪ, 166, ಅಣ್ಣಾಪಿಳ್ಳೆಬೀದಿ, ಮದ್ರಾಸು - 1

ಮನೆಯಲ್ಲಿ ನಾನು ಮಾಡುವ ತಂಟೆಗಳಿಂದಲೇ ನನಗೆ ತಂಟಲುಮಾರಿ ವೆಂಕಟುವೆಂದು ಅಡ್ಡ ಹೆಸರಿಟ್ಟಿದ್ರು. ಶಾಲೇಲಿಕೂಡಾ ನಾನು ತುಂಟವೆಂಕಟು ಅಂತ ಹೆಸರು ಗಿಟ್ಟಿಸಿದೆ. ಅದನ್ನೆಲ್ಲಾ ಹೇಳಿ ನಿಮಗೀಗ ತಂಟೆಮಾಡುವುದಿಲ್ಲ. ಕ್ಲಾಸಿನ ಹುಡುಗರೆಲ್ಲ ನನ್ನ ತಂಟೆಗೆ ಮೆಚ್ಚಿ ನನ್ನ ಪಕ್ಷವಾಗಿದ್ರು ಅಂತ ಒಂದೇ ಮಾತು ಹೇಳಿದರೆ ಸಾಕು.

ಪಾಪ, ವಾಸುಮಾಸ್ತರು ಹೊಸ್ತಾಗಿ ಶಾಲೆಗೆ ಬಂದಿದ್ರು. ಅವರು ಕ್ಲಾಸಿನಲ್ಲಿ ಸೇದೋದು ನಶ್ಯ. ಮನೆಗೆ ಹೋಗುವಾಗ ಬೀದಿಯಲ್ಲಿ ಸೇದೋದು ಒಂದು ಸಿಗರೇಟು. ಅದಕ್ಕಾಗಿಯೇ ಅವರ ಜೇಬಿನಲ್ಲಿ ಬೆಂಕಿಪೊಟ್ಣ, ಕರ್ಚೀಫ್ ಎಲ್ಲಾ ಅಡಗಿತ್ತು. ಸಾಧಾರಣ ಮಧ್ಯಾಹ್ನದ ಪೀರಿಯಡ್‌ನಲ್ಲಿ ಅವರಿಗೆ ಅರ್ಧಗಂಟೆಯಾದರೂ ತೂಕಡಿಸದಿರಲು ಸಾಧ್ಯವೇ ಇಲ್ಲ. ಆಗ ನಮಗೆ ಕಾಪೀ ಬರಿಯಲಿಕ್ಕೆ ಹೇಳಿ ಬೆಲ್ಲ ತೂಗತೊಡಗುತ್ತಾರೆ.

ಆ ದಿನ ನನಗೊಂದು ಚೇಳು ಸಿಕ್ಕಿತ್ತು. ಅದರ ಕೊಂಬು ಕಿತ್ತು ಅದನ್ನು ಬೆಂಕಿಪೊಟ್ಣದೊಳಗೆ ಹಾಕಿ ಕೊಟ್ಟಿದ್ದ ನಮ್ಮ ಸಿದ್ದಪ್ಪ. ಅದನ್ನು ನಾನು ಶಾಲೆಗೆ ತಂದು ಹುಡುಗರನ್ನು ಬೆಚ್ಚಿಸಬೇಕಂತ ಮಾಡಿದೆ. ಆದರೆ ಮಾಸ್ತರ ತೂಕಡಿಕೆಯನ್ನು ನೋಡಿದಾಗ—ಕ್ಲಾಸಿನ ಎಲ್ಲಾ ಹುಡುಗರಿಗೂ ಕಣ್ಸನ್ನೆ ಮಾಡಿದೆ. ಮಾಸ್ತರ ಜೇಬಿಂದ ಬೆಂಕಿಪೊಟ್ಟಣವನ್ನು ಜಾರಿಸಿ, ಈ ಚೇಳಿನ ಬೆಂಕಿಪೊಟ್ಣ ಇಟ್ಟು ಸುಮ್ಮನಿದ್ದೆ.

ಶಾಲೆ ಬಿಟ್ಟಮೇಲೆ ಹೋಗುತ್ತಾ ಬೆಂಕಿಪೊಟ್ಣವನ್ನು ಎತ್ತಿದ ವಾಸುಮಾಸ್ತರು—"ಅಯ್ಯಮ್ಮೊ!" ಎಂದು ಹಾರಿಬಿದ್ದರು. ಹಿಂದೆಯೇ ಇದ್ದ ನಾವೆಲ್ಲಾ "ಏನ್‌ಸಾರ್, ಏನ್‌ಸಾರ್" ಎಂದು ಅವರನ್ನು ಮುತ್ತಿದೆವು. ಸಿಗರೇಟುಕೂಡ ಕೆಳಗೆ ಬಿದ್ದುಹೋಗಿತ್ತು. ಮತ್ತೆ ಸತ್ಯತಿಳಿದು ಅವರು ಕಣ್ಣು ಕೆಂಪುಮಾಡಿದಾಗ, ನಾವೆಲ್ಲಾ "ನಾನಲ್ಲ ನಾನಲ್ಲ" ಎಂದು ತಪ್ಪಿಸಿಕೊಂಡೆವೆನ್ನಿ.

ಮತ್ತೊಮ್ಮೆ ವಾಸುಮಾಸ್ತರು ತೂಕಡಿಸುವಾಗ ಅವರ ಜುಟ್ಟಿನ ತುದಿಗೆ ಒಂದು ದಾರ ಕಟ್ಟಿ, ಆ ದಾರದ ತುದಿಗೆ ಬೆತ್ತವನ್ನು ಕಟ್ಟಿಟ್ಟೆ. ಅವರು ಎದ್ದಾಗ ಬೆತ್ತವು ಅವರ ಹಿಂದೆ ನೇತಾಡುವುದನ್ನು ಕಂಡು ನಾವೆಲ್ಲಾ ನಕ್ಕೆವು. ನಮಗೆ ಆ ಬೆತ್ತದಿಂದಲೇ ಬಿಸಿಬಿಸೀ ಛಪ್ಪ ಸಿಕ್ಕಿತು.

ಇಂಥ ಎಷ್ಟು ಪೆಟ್ಟು ತಿಂದೆವೋ ಏನೋ! ನನಗೆ ಲಕ್ಷ್ಯವೇ ಇಲ್ಲ. ಒಂದು ದಿನ ನಾನು ಒಂದು ಕತ್ತರಿಯೊಂದಿಗೆ ಶಾಲೆಗೆ ಬಂದಿದ್ದೆ—ತಂದೆಯಿಂದ ಕದ್ದದ್ದು. ವಾಸುಮಾಸ್ತರ ಬಾಲ ಜುಟ್ಟು ಕತ್ತರಿಸಿ ಅವರ ಕರ್ಚೀಪಿನೊಂದಿಗೆ ಕಿಸೆಯಲ್ಲಿ ತುರುಕಿಬಿಡಬೇಕು. ಅವರು ನಸ್ಯ ಎಳೆದು ಕರ್ಚೀಪಿನಿಂದ ಮೂಗೊರಿಸುವಾಗ, ಆಗುವ ತಮಾಶೆ ನೋಡಬೇಕಂತ ಆಸೆ.

ಕರಕ್ಕಂತ ಅವರ ಕೂದಲು ಕತ್ತರಿಸಿದ್ದೇ ತಡ. ಕತ್ತರಿಕೈಯಾಗಿ ನನ್ನ ಹಿಡಿದುಬಿಟ್ರು. ಮತ್ತೆ ನನ್ನ ಅವಸ್ಥೆ! "ಕ್ಷೌರಿಕ ವೆಂಕ" ಅಂತ ಬರೆದ ಅಟ್ಟೆಯನ್ನು ನನ್ನ ಕೊರಳಿಗೆ ನೇತು ಹಾಕಿಸಿಕೊಂಡು, ಕ್ಲಾಸುಕ್ಲಾಸು ಮೆರೆವಣಿಗೆಮಾಡಿ ಕ್ಷಮೆ ಕೇಳಿಕೊಳ್ಳಬೇಕಾಯಿತು. ಇದನ್ನು ಕೇಳಿ ಮನೆಯಲ್ಲಿ ಆದ ತಂದೆಯ ಮಾರ್ಯಾದೆಯನ್ನೂ ನಾನೆಂದೂ ಮರೆಯಲಾರೆ!

* ಇವರಿಗೆ ಒಂದು ವರ್ಷ 'ಚಂದಮಾಮ' ಉಚಿತವಾಗಿ ಕಳಿಸಲಾಗುವುದು.




ಅನೇಕ ವರ್ಷಗಳ ಹಿಂದೆ ಕುಂಭಾವತಿ ಎಂಬ ನಗರದಲ್ಲಿ ಶುಂಬಾಲನೆಂಬ ರಾಜನಿದ್ದ. ಆತನ ಆಸ್ಥಾನದಲ್ಲಿ ಅನೇಕ ಜಟ್ಟಿಗಳಿದ್ದರು.

ಒಂದು ದಿನ ಪ್ರಚಂಡಗಂಡನೆಂಬ ಬಿರುದಾಂಕಿತನಾದ ಗುಂಡಾಜಟ್ಟಿ ಎಂಬವನು ದಿಗ್ವಿಜಯ ಮಾಡುತ್ತಾ ಕುಂಭಾವತೀ ನಗರಕ್ಕೆ ಬಂದನು. ಅವನು ದೇಶದೇಶಗಳ ಹಿರಿಜಟ್ಟಿಗಳನ್ನೆಲ್ಲಾ ಗೆದ್ದುಕೊಂಡು ಪ್ರಶಂಸಾ ಪತ್ರಿಕೆಗಳ ಹೊರೆಯನ್ನೇ ಹೊತ್ತುಕೊಂಡಿದ್ದನು. ಅಂತಹ ಗುಂಡಾಜಟ್ಟಿ ಶುಂಬಾಲನ ಆಸ್ಥಾನಕ್ಕೆ ಬಂದು "ನನ್ನೊಡನೆ ಕಾದು ಗೆಲ್ಲುವವರಾರಾದರು ಇದ್ದರೆ ಮುಂದೆ ಬರಲಿ. ಇಲ್ಲದಿದ್ದರೆ ಸೋಲನ್ನೊಪ್ಪಿಕೊಂಡು ನನಗೆ ಪ್ರಶಸ್ತಿ ಪತ್ರವನ್ನು ಕೊಡಬೇಕು" ಎಂದು ಠೀವಿಯಿಂದ ಸವಾಲು ಹಾಕಿದನು.

ಆಸ್ಥಾನಜಟ್ಟಿಗಳೆಲ್ಲಾ ಅವನ ಮುಂದೆ ನಿಲ್ಲುಲು ಧೈರ್ಯವಿಲ್ಲದೆ ಮೂಕರಾಗಿ ಕುಳಿತರು. ಆದರೆ ಮಂತ್ರಿ ಎದ್ದುನಿಂತು ಉತ್ತರ ಕೊಟ್ಟ. "ಅದಕ್ಕೇನು? ಬಹಳ ಸಂತೋಷ. ನಮ್ಮ ಪ್ರಚಂಡಗಂಡರಗಂಡ-ಉದ್ಧಂಡ ಶುಂಡಾಲ ರುಂಡಗಳ ಚೆಂಡಾಡ ಕಲಿಮುಂಡ ದೋರ್ದಂಡ ಗಂಡುಗೋಗರ್ಗುಂಡ ಜಟ್ಟಿಗಳು ನಾಡದು ಬರುತ್ತಾರೆ. ಅವರು ಬರುವವರೆಗೆ ನಮ್ಮ ಅತಿಥಿಗಳಾಗಿರಬೇಕು. ಅವರೇ ನಿಮಗೆ ತಕ್ಕ ಉತ್ತರ ಕೊಡುತ್ತಾರೆ" ಎಂದನು.

ಗುಂಡಾಜಟ್ಟಿ ಒಪ್ಪಿಕೊಂಡಿರಬೇಕಾಯಿತು. ಅವನು ರಾಜನು ಏರ್ಪಡಿಸಿದ ಗೂಡಾರದಲ್ಲಿ ತಂಗಿದ್ದನು. ಅವನ ಮನಸ್ಸಿನಲ್ಲಿ ಆ ಗೋಗರ್ಗುಂಡಜಟ್ಟಿ ಯಾರೋ ಎಂದು ಯೋಚನೆ ಮಾಡುತ್ತಿದ್ದನು. ಸೇವಕರೊಡನೆ 'ಅವನಾರು ಎಲ್ಲಿದ್ದಾನೆ?' ಎಂದು ವಿಚಾರಿಸಿದ. 'ಅವನು ನಮ್ಮ ಆಸ್ಥಾನ ಜಟ್ಟಿಗಳಿಗೆಲ್ಲ ಅಧಿಪತಿ. ಗುರು. ಅವರಿಗೆ ದಿಗ್ವಿಜಯ ಮಾಡುವ ಬಯಕೆ ಇಲ್ಲದ್ದರಿಂದ ಏಕಾಂತದಲ್ಲಿ ಯೋಗಸಾಧನೆ ಮಾಡುತ್ತಿರುತ್ತಾರೆ. ಸಮಯ ಬಂದರಷ್ಟೇ ಬರುತ್ತಾರೆ' ಎಂದರು ಸೇವಕರು.

ಮರುದಿನ ಸಮೀಪದಲ್ಲಿಯೇ ದೊಡ್ಡದೊಂದು ಬಿಡಾರ ಹಾಕಲ್ಪಟ್ಟಿತು. ಅದರ

ಎಂ. ಎಚ್. ಶಂಕರನಾರಾಯಣ, ಬೆಂಗಳೂರು



ಬಾಗಿಲು ಸಾಮಾನ್ಯ ಬಾಗಿಲಿಗಿಂತ ಎರಡರಷ್ಟು ದೊಡ್ಡದು. ಗುಂಡಾಜಟ್ಟಿ 'ಅದೇನು? ಅದೇಕೆ?' ಎಂದು ಕೇಳಿದ. 'ನಮ್ಮ ಗೋರ್ಗುಂಡ ಜಟ್ಟಿಗಳಿಗೆ ಸಾಮಾನ್ಯಮನೆ ಸಾಕೆ?' ಎಂದು ಉತ್ತರ ಬಂತು.

ಮತ್ತೆ ನೋಡಿದಾಗ ಗಾಡಿಗಳ ತುಂಬ ಬಾದಾಮಿ, ಹಂಡೆಗಳತುಂಬ ಬೆಣ್ಣೆ, ಮುಂತಾದುವು ಆ ಬಿಡಾರದೊಳಗೆ ತುಂಬ ತೊಡಗಿದುವು. ಮರದ ದಿಮ್ಮಿಗಳಿಂದ ಮಾಡಿದ ದೊಡ್ಡ ಮಂಚವನ್ನು ಅನೇಕಮಂದಿ ಸೇರಿ ಹೊತ್ತುಕೊಂಡು ಬಂದು ಅದರೊಳಗಿಟ್ಟರು. ಕೂಲಿಯಾಳುಗಳು ಬಂಡೆಗಲ್ಲುಗಳನ್ನು ನೆಲಕ್ಕೆ ಹಾಸುತ್ತ 'ಸರಿಯಾಗಿ ಬಂಡೆಕಲ್ಲು ನೆಲಕ್ಕೆ ಜಡಿಯಿರಿ. ಅವರು ನಡೆದಾಡುವಾಗ ನೆಲ ಹೊಂಡವಾದೀತು' ಎಂದು ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದರು. 'ಪಾಪ, ನಮ್ಮ ಜಗಜಟ್ಟಿಗಳ ವಿಷಯ ಈ ಹೊಸ ಜಟ್ಟಿಗೆಗೊತ್ತಿಲ್ಲ. ಏನೋ ಊರುಗೆದ್ದುಕೊಂಡು ಬಂದಿದ್ದಾನೆ' ಎಂದು ಕೆಲವರು ಮಾತಾಡಿಕೊಳ್ಳುತ್ತಿರುವುದನ್ನು ಕೂಡ ಗುಂಡಾಜಟ್ಟಿ ಕೇಳಿದನು.

ಮತ್ತೆ ಮರುದಿನ ಬೆಳಗ್ಗೆ ನೋಡಿದಾಗ ಆ ಹೊಸ ಬಿಡಾರದ ಮುಂದೆ ಇಪ್ಪತ್ತೆಂಟು ಕುದುರೆಗಳ ಬಲು ದೊಡ್ಡದಾದ ಗಾಡಿ ಒಂದು ನಿಂತಿತ್ತು. 'ಪ್ರಚಂಡಗಂಡರ ಗಂಡ ಉದ್ಧಂಡ ಶುಂಡಾಲ ರುಂಡಗಳ ಚೆಂಡಾಡ ಕಲಿಮುಂಡ ದೋರ್ದಂಡ ಗಂಡುಗೋರ್ಗುಂಡ ಮಹಾಮಲ್ಲರಿಗೆ ಜೈ' ಎಂದು ಮಹಾಘೋಷವೆದ್ದಿತು. ಆ ಜಟ್ಟಿ ಆಗತಾನೇ ಆ ಗಾಡಿಯಲ್ಲಿ ಬಂದಿರುವನೆಂದು ತಿಳಿದು ಬಂತು. ಸ್ವಲ್ಪ ಹೊತ್ತಿಗೆ ಶುಂಬಾಲ ಮಹಾರಾಜನು ಆ ಬಿಡಾರದೊಳಗೆ ಹೊಕ್ಕು ಅವನ ದರ್ಶನ ಮಾಡಿಕೊಂಡು ಗುಂಡಾಜಟ್ಟಿಯ ಬಳಿಗೆ ಬಂದು, "ನಮ್ಮ ಗೋರ್ಗುಂಡರು ಬಂದಿದ್ದಾರೆ. ನಾಳೆ ನಿಮ್ಮಿಬ್ಬರಿಗೂ ಪರಿಚಯ ಮಾಡಿಸಿ ಕಾಳಗವೇರ್ಪಡಿಸುತ್ತೇನೆ" ಎಂದು ತಿಳಿಸಿ ಹೊರಟುಹೋದನು.

ಮರುದಿನ ಬೆಳಿಗ್ಗೆ ನೋಡಿದಾಗ ಗುಂಡಾಜಟ್ಟಿ ಪತ್ತೇ ಇಲ್ಲದೆ ಮಾಯವಾಗಿದ್ದನು. ಮತ್ತೆ ಅವನ ದಿಗ್ವಿಜಯದ ಮಾತೇ ಇರಲಿಲ್ಲ.

ತಮ್ಮ ಗೌರವವನ್ನುಳಿಸಿದ ಮಂತ್ರಿಯ ಚಾತುರ್ಯಕ್ಕೆ ರಾಜ ತುಂಬಾ ಮೆಚ್ಚಿದ.






ಮೊಗಲರ ಚಕ್ರವರ್ತಿ ಔರಂಗಜೇಬನಿಗೆ ಮಹಮ್ಮದೀಯ ಮತವೆಂದರೆ ಎಷ್ಟು ಅಭಿಮಾನವೋ ಇತರ ಮತಗಳೆಂದರೆ ಅಷ್ಟೇ ದ್ವೇಷ. ಅದರಲ್ಲೂ ಹಿಂದೂ ಮತವೆಂದರೆ ಉರಿದು ಬೀಳುವನು. ಅವನಿಂದ ಹಿಂದೂ ಮತವನ್ನು ಕಾಪಾಡಿ, ದೇಶವನ್ನು ವಶಮಾಡಿಕೊಂಡು ಸ್ವತಂತ್ರ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂದು ಮಹಾರಾಷ್ಟ್ರ ನಾಯಕನಾದ ಶಿವಾಜಿ ಕಂಕಣ ತೊಟ್ಟನು. ಹಾಗೆ ತೊಟ್ಟು ಒಂದೊಂದೇ ಕೋಟೆಯನ್ನು ವಶಮಾಡಿಕೊಳ್ಳಲು ಪ್ರಾರಂಭಿಸಿದನು. ಶಿವಾಜಿಯಲ್ಲಿ ಇಂಥ ಸ್ವದೇಶಾಭಿಮಾನ ಉಂಟಾಗಲು ಕಾರಣಳು, ಆತನ ಮಾತೆ ಜಿಜೀಬಾಯಿ.

ಜಿಜೀಬಾಯಿ ಪ್ರತಾಪಗಡ ಕೋಟೆಯಲ್ಲಿ ವಾಸಿಸುತ್ತಿದ್ದಳು. ಆ ಕೋಟೆಗೆ ಸಮೀಪದಲ್ಲಿಯೆ ಸಿಂಹಗಡವೆಂಬ ಮತ್ತೊಂದು ಕೋಟೆಯಿತ್ತು. ಒಂದು ದಿನ ಏನೋ ಆಲೋಚಿಸುತ್ತಾ ಅತ್ತಕಡೆಗೆ ನೋಡಲು, ಜಿಜೀಬಾಯಿಗೆ ಆ ಕೋಟೆಯ ಬತ್ತೇರಿಗಳು ಕಾಣಿಸಿದವು. ಆ ಕೋಟೆ ಮೊಗಲರ ವಶದಲ್ಲಿತ್ತು. ಉದಯಭಾನು ಎಂಬ ರಜಪೂತನು ಅದನ್ನು ಕಾಪಾಡುತ್ತಿದ್ದನು. ಅವನನ್ನೂ ಶಿವಾಜಿ ವಶಪಡಿಸಿಕೊಳ್ಳದಿರುವುದು ಜಿಜೀಬಾಯಿಗೆ ಸಮಂಜಸವಾಗಿ ತೋರಲಿಲ್ಲ. ಕೂಡಲೇ ಮಗನಿಗೆ ಬರುವಂತೆ ಹೇಳಿ ಕಳುಹಿಸಿದಳು.

ಶಿವಾಜಿ ಆಗ ರಾಜಗಡ ಕೋಟೆಯಲ್ಲಿದ್ದ. ತಾಯಿ ಹೇಳಿ ಕಳುಹಿಸಿದಳೆಂದ ಕೂಡಲೇ ಆತನು ಕುದುರೆ ಹತ್ತಿ ಪ್ರತಾಪಗಡಕ್ಕೆ ಬಂದು ತಾಯಿಗೆ ನಮಸ್ಕಾರ ಮಾಡಿ "ಅಮ್ಮಾ ಏನಪ್ಪಣೆ" ಎಂದ.

ಆಕೆ ನಗುತ್ತಾ "ನನಗಿಲ್ಲಿ ಹೊತ್ತು ಹೋಗುತ್ತಿಲ್ಲ. ಚದುರಂಗ ಆಡೋಣವೆಂದು ಬರಮಾಡಿಕೊಂಡೆ; ಒಂದು ಆಟ ಆಡೋಣವೇ?" ಎಂದಳು. ಶಿವಾಜಿ ಆಶ್ಚರ್ಯ ಹೊಂದಿದ. ತಾಯಿಯ ಕೋರಿಕೆಯಂತೆ ಆಡಲು ಕುಳಿತುಕೊಂಡ.

ಆಟದಲ್ಲಿ ಜಿಜೀಬಾಯಿಗೆದ್ದಳು. "ನಾನು ಗೆದ್ದೆ. ನೀನೇನು ಕೊಡುವೆ, ಶಿವಾ?" ಎಂದಳು.

ಬಿ. ವೆಂಕೋಬರಾವ್, ಹೊಸಳ್ಳಿ



"ಅಮ್ಮಾ ನೀನೇನು ಕೇಳಿಕೊಂಡರೆ ಅದನ್ನು ಕೊಡುವೆನು" ಎಂದ ಶಿವಾಜಿ. ಆಕೆ ಕೂಡಲೇ ದೂರದಲ್ಲಿ ಕಾಣಿಸುತ್ತಿದ್ದ ಸಿಂಹ ಗಡದ ಕೋಟೆಯನ್ನು ತೋರಿಸಿ, "ಅಪ್ಪಾ, ಆ ಕೋಟೆ ಮರಾಟರ ವಶವಾಗುವವರೆಗೆ ನನಗೆ ನಿದ್ದೆ ಬಾರದು" ಎಂದಳು.

ಶಿವಾಜಿ ಸ್ತಬ್ಧನಾದ "ಅಮ್ಮಾ ಉದಯ ಭಾನುವನ್ನು ಸೋಲಿಸಿ ಕೋಟೆ ವಶಪಡಿಸಿ ಕೊಳ್ಳುವುದು ಸುಲಭವಾದ ಕಾರ್ಯವಲ್ಲ" ಜಿಜೀಬಾಯಿ ಅದನ್ನು ಕೇಳಿಸಿಕೊಳ್ಳಲಿಲ್ಲ. "ಏನು ಕೇಳಿದರೆ ಅದನ್ನು ಕೊಡುವೆನೆಂದೆ ಯಲ್ಲಾ, ಮತ್ತೆ" ಎಂದು ಒಳಗೆ ಹೊರಟು ಹೋಗಿಬಿಟ್ಟಳು.

ಶಿವಾಜಿ ಮತ್ತೆ ರಾಜಗಡವನ್ನು ಸೇರಿ, ಆಸ್ಥಾನದಲ್ಲಿದ್ದ ವೀರರನ್ನೆಲ್ಲಾ ಬರಮಾಡಿ ತಾಯಿಯ ಆಜ್ಞೆಯನ್ನು ತಿಳಿಯಪಡಿಸಿದ. ವರೆಲ್ಲರೂ ಏಕಕಂಠದಿಂದ "ಇದನ್ನು ಸಾಧಿ ಸಲು ತಾನಾಜಿಯೇ ಸಮರ್ಥ" ಎಂದರು.

ಆಗ ತಾನಾಜಿ ಅಲ್ಲಿರಲಿಲ್ಲ. ಮಗನ ಮದು ವೆಗೆ ತೆರಳಿದ್ದ. ತತ್‌ಕ್ಷಣವೇ ಬರಬೇಕೆಂದು ತಾನಾಜಿಗೆ ಸುದ್ಧಿಹೋಯಿತು.

ಎನ್ನೊಂದು ಗಳಿಗೆಯೊಳಗೆ ಲಗ್ನವಿರುವು ದೆನ್ನುವಾಗ ಶಿವಾಜಿ ಕಳುಹಿಸಿದ ದೂತನು ಮದುವೆಯ ಮನೆಯನ್ನು ಸೇರಿ ಪ್ರಭುಗಳ ಆಜ್ಞೆಯನ್ನು ತಾನಾಜಿಗೆ ತಿಳಿಸಿದ.

"ಆ ಮೂರು ಗಂಟು ಬಿದ್ದ ಕೂಡಲೇ ಹೋಗುವಿರಂತೆ" ಎಂದು ಕನ್ಯಾದಾತನು ಹೇಳಿದ. "ಕ್ಷಣವಾದರೂ ನಿಲ್ಲಲು ಅವಕಾಶ ವಿಲ್ಲ" ಎಂದು ತಾನಾಜಿ ಕುದುರೆ ಹತ್ತಿ ನಾಗಾ ಲೋಟದಿಂದ ರಾಜಗಡವನ್ನು ತಲುಪಿದ.

ಶಿವಾಜಿ ಆತನಿಗೆ ರಾಜಮಾತೆಯ ಕೋರಿಕೆ ಯನ್ನು ತಿಳಿಸಿ "ಸಿಂಹಗಡ ಮರಾಟರ ವಶ ವಾಗುವವರೆವಿಗೂ ತನಗೆ ನಿದ್ದೆ ಹತ್ತದು— ಎಂದರು ಮಾತಾಜಿ. ನೀನೋ ಇಲ್ಲ ನಾನೋ ಈ ಕೆಲಸಕ್ಕೆ ನುಗ್ಗಬೇಕು" ಎಂದ.

"ತಾನಾಜಿ ಸಾಧಿಸಲಾರದ ಕೆಲಸವೇ ಇಲ್ಲ. ರಾಜಮಾತೆಯ ಆಜ್ಞೆಯನ್ನು ಪರಿಪಾಲಿಸಲು ಪ್ರಾಣವನ್ನಾದರೂ ಬಲಿಕೊಡಲು ನಾನು ಸಿದ್ಧನಿದ್ದೇನೆ" ಎಂದು ತನ್ನ ದಳಕ್ಕೆ ವಾರ್ತೆ ಕಳುಹಿಸಿದ. ಆ ರಾತ್ರಿ ಸಿಂಹಗಡದಲ್ಲಿ ಎಲ್ಲರೂ ಗಾಢ ನಿದ್ರೆಯಲ್ಲಿರುವಾಗ ಸಿಂಹಗಢದ



ಸುತ್ತಲೂ ತಾನಾಜಿಯ ಸೈನಿಕರು ಸಮಾವೇಶವಾಗಿ ಕೋಟೆಯನ್ನು ಭೇದಿಸುವುದೆಂದು ಯೋಚಿಸುತ್ತಿದ್ದರು.

ತಾನಾಜಿಯ ಹತ್ತಿರ ಒಂದು ಉಡ ಇತ್ತು. ಅದನ್ನು ಆತನು 'ಯಶೋವಂತ' ಎಂದು ಕರೆಯುತ್ತಿದ್ದನು. ಅದರ ಸೊಂಟಕ್ಕೆ ಒಂದು ಹಗ್ಗವನ್ನು ಕಟ್ಟಿ ಮೇಲೆ ಹೋಗು ಎಂದು ಆಜ್ಞಾಪಿಸಿದರೆ ಅದು ಸರಸರನೆ ಕೋಟೆಯ ಗೋಡೆಯನ್ನೇರುವುದು. ಅದು ಹಾಗೆ ಹೋಗಿ ಕೊಟೆಯಲ್ಲಿ ಯಾವುದಾದರೂ ಕಲ್ಲನ್ನು ಕಚ್ಚಿ ಹಿಡಿದುಕೊಳ್ಳುವುದು. ಅದರ ಸೊಂಟದಿಂದ ನೇತಾಡುವ ಹಗ್ಗದ ಸಹಾಯದಿಂದ ತಾನಾಜಿ ಕೋಟೆಯ ಗೋಡೆ ಹತ್ತಿ, ಆ ಹಗ್ಗವನ್ನು ಯಾವುದಾದರೊಂದು ಗೂಟಕ್ಕೆ ಕಟ್ಟಿ, ಅದರ ಮೂಲಕ ಒಬ್ಬೊಬ್ಬರನ್ನಾಗಿ ತನ್ನ ಸೈನಿಕರನ್ನು ಬರಮಾಡಿಕೊಳ್ಳುವುದು ಪದ್ಧತಿ. ಸಿಂಹಗಡವನ್ನೂ ಅದೇ ರೀತಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಯಶೋವಂತನನ್ನು ಯಥಾಪ್ರಕಾರ ಮೇಲಕ್ಕೆಬಿಟ್ಟ.

ಆದರೆ ಉಡ ಆ ರಾತ್ರಿ ಎಂದಿನಂತೆ ಮೇಲಕ್ಕೆ ಹೋಗಿ ಒಂದು ಕಲ್ಲನ್ನು ಹಿಡಿದುಕೊಳ್ಳದೆ ಸರಸರನೆ ಹಿಂದಕ್ಕೆ ಬಂದುಬಿಟ್ಟಿತು. ಅದು ಆ ರೀತಿ ಹಿಂತಿರುಗಿ ಬಂದುದನ್ನು ನೋಡಿ ತಾನಾಜಿ ಅದನ್ನು ಮೂದಲಿಸಿದನು. ಆತನ ದಂಡನಾಯಕರಲ್ಲಿ ಒಬ್ಬಾತನು "ಸ್ವಾಮಿ, ಕಾರಣವಿಲ್ಲದೆ ಅದು ಹಿಂದಕ್ಕೆ ಬರುವುದಿಲ್ಲ. ಕೋಟೆಯೊಳಗೆ ಏನೋ ಗಲಿ



ಬಲಿ ನಡೆದಿರಬೇಕು. ಈ ವಿಷಯ ತಮಗೆ ತಿಳಿಸಲು ಅದು ಹಿಂದಿರುಗಿ ಬಂದಿರಲು ಬಹುದು" ಎಂದ.

ಏನಾದರಾಗಲೀ ಬೆಳಗಾಗುವಷ್ಟರೊಳಗೆ ಸಿಂಹಗಡ ಮರಾಟರ ವಶವಾಗಲೇ ಬೇಕು ಎಂದು ತಾನಾಜಿ ಉಡಕ್ಕೆ 'ಚಲೋ' ಎಂದ. ಉಡ ಯಜಮಾನನ ಮನೋಗತವನ್ನು ಅರ್ಥ ಮಾಡಿಕೊಂಡಂತೆ ಒಂದುಸಾರಿ ತಲೆಯಾಡಿಸಿ ಸರಸರನೆ ಮೇಲಕ್ಕೆ ಹೋಗಿ ಕಲ್ಲನ್ನು ಕಚ್ಚಿ ಹಿಡಿದುಕೊಂಡಿತು. ಆ ಹಗ್ಗವನ್ನು ಹಿಡಿದು ಕೊಂಡು ಕೂಡಲೇ ತಾನಾಜಿ ಕೋಟೆಯ ಗೋಡೆಮೇಲೇರಿದನು. ಮತ್ತೊಂದು ಗಳಿಗೆ ಯಲ್ಲಿ ಆತನ ಸೈನಿಕರೆಲ್ಲರೂ ಹತ್ತಿ ಬಂದು ಆತನ ಹಿಂದೆ ನಿಂತರು.

ಉಡ ಮೊದಲು ಹಿಂತಿರುಗಿ ಬರಲು ಕಾರಣವಿತ್ತು. ಕೋಟೆಯ ಬಳಿಗೆ ಪಹರೆ ಯವರ ಓಡಾಟ ಕೇಳಿ ಅದನ್ನು ತನ್ನ ಯಜ ಮಾನನಿಗೆ ತಿಳಿಯಪಡಿಸಲು ಅದು ಬಂದಿತು. ಕೋಟೆಯ ಗೋಡೆಮೇಲೆ ಮಹಾರಾಷ್ಟ್ರ ವೀರರ ಹೆಜ್ಜೆ ಸಪ್ಪಳ ಕೇಳಿದಕೂಡಲೇ ಪಹರೆಯವರು ಕಹಳೆಗಳನ್ನು ಊದಿ ಮಲ ಗಿದ್ದವರನ್ನೆಲ್ಲಾ ಎಚ್ಚರಿಸಿದರು.

ಉದಯಭಾನು ರಜಪೂತ ವೀರ ರೊಂದಿಗೂ, ಮೊಗಲಾಯ ವೀರರೊಂದಿಗೂ ಬಂದು ತಾನಾಜಿಯನ್ನು ಎದುರುಗೊಂಡನು. ಎರಡು ಪಕ್ಷಗಳ ಮಧ್ಯೆ ಭಾರಿ ಕದನ ನಡೆ ಯಿತು. 'ಭವಾನಿದೇವಿಗೆ ಜೈ, ಶಿವಾಜಿ ಮಹಾ



ರಾಜನಿಗೆ ಜೈ' ಎಂದು ಪ್ರತಿಯೊಬ್ಬ ಮರಾಟ ವೀರನು ಹತ್ತಾರು ಜನರನ್ನು ಕೊಲ್ಲುತ್ತಿದ್ದನು. ಮೊಗಲರ ಸೇನೆಗಿಂತಲೂ ಮರಾಟರ ಸೇನೆ ಕಡಿಮೆಯಿತ್ತು. ಆದರೂ ಅಂದಿನ ಯುದ್ಧ ದಲ್ಲಿ ಮರಾಟರ ಕೈ ಮೇಲಾಗಿ ಅವರಿಗೆ ವಿಜಯ ಲಭಿಸಿತು. ಅದಕ್ಕೆ ಮುಖ್ಯ ಕಾರಣ ಅವರ ನಾಯಕನಾದ ತಾನಾಜಿ. ಯುದ್ಧ ರಂಗದಲ್ಲಿ ಎಲ್ಲಿ ನೋಡಿದರೂ ಆತನು ಕಾಣಿಸಿ ಕೊಂಡು, ಜಯಧ್ವನಿಗಳೊಂದಿಗೆ ತನ್ನ ಸೈನಿಕರನ್ನು ಹುರಿದುಂಬಿಸುತ್ತಾ ವೀರಾವೇಶ ದಿಂದ ಕಾದಾಡುತ್ತಿದ್ದನು.

ಬೆಳಗಾಗುವ ಮುನ್ನವೇ ಸಿಂಹಗಡವನ್ನು ವಶ ಪಡಿಸಿಕೊಂಡನು. ಆದರೆ ತಾನಾಜಿಗೆ ಮೈತುಂಬಾ ಗಾಯಗಳಾದುವು. "ನನ್ನ

ಪ್ರಾಣ ಇನ್ನೂ ಬಹಳ ಹೊತ್ತು ಉಳಿಯುವುದಿಲ್ಲ. ನನ್ನನ್ನು ಶಿವಾಜಿ ಮಹಾರಾಜನ ಹತ್ತಿರಕ್ಕೆ ಕರೆದೊಯ್ಯಿರಿ" ಎಂದ.

"ಮಹಾರಾಜರೇ ಇಲ್ಲಿಗೆ ದಯಮಾಡಿಸುತ್ತಿರುವರು" ಎಂದು ಹೇಳುತ್ತಾ ಬಾಬೂಜಿ ಅಲ್ಲಿಗೆ ಬಂದ. ಬಾಬೂಜಿ ತಾನಾಜಿಯ ಮಗ. ತನ್ನ ಮಗನ ಸ್ವರವನ್ನು ಕಂಡುಹಿಡಿದು "ಅಪ್ಪಾ, ಹಸೆಯ ಮೇಲಿರಬೇಕಾದ ನೀನು ಇಲ್ಲಿಗೇಕೆ ಬಂದೆ?" ಎಂದ ತಾನಾಜಿ.

ಮಹಾರಾಷ್ಟ್ರ ವೀರರೆಲ್ಲಾ ಇಲ್ಲಿ ಪ್ರಾಣತ್ಯಾಗ ಮಾಡುತ್ತಿರಲು ವೀರ ತಾನಾಜಿಯ ಮಗ ಮದುವೆಯ ಊಟಕ್ಕೆ ನಿಲ್ಲುವನೇ? ಅಸಂಭವ" ಎಂದ ಬಾಬೂಜಿ. ಆ ಮಾತುಗಳನ್ನು ಕೇಳಿ ತಾನಾಜಿ ಸಂತೋಷಪಟ್ಟು ಮಗನನ್ನು ಕುರಿತು "ನನ್ನ ತರುವಾಯ ಮಹಾರಾಜರನ್ನು ಭಕ್ತಿವಿಶ್ವಾಸಗಳಿಂದ ಸೇವಿಸು. ದೇಶಕ್ಕಾಗಿ ದೇಹವನ್ನಾದರೂ ಅರ್ಪಿಸು" ಎಂದು ಹಿತಬೋಧೆ ಮಾಡಿದ. ಅಷ್ಟರಲ್ಲಿ ಶಿವಾಜಿ ಬಂದ. "ಮಹರಾಜ್ ಸಿಂಹಗಡವು ಮರಾಟರ ವಶವಾಯಿತು. ರಾಜಮಾತೆಯ ಕೋರಿಕೆ ನೆರವೇರಿತು" ಎಂದು ಹೇಳುತ್ತಾ ಆ ಮಹಾವೀರನು ಶಿವಾಜಿಯ ತೊಡೆಯಮೇಲೆಯೇ ಪ್ರಾಣಬಿಟ್ಟನು.

ತಾನಾಜಿ ಮರಣಿಸಿದ ಕೂಡಲೇ ಶಿವಾಜಿ ಬಾಲಕನಂತೆ ಗೊಳೋ ಎಂದು ಅತ್ತ. ಶಿವಾಜಿ ಹೋಗಿ, "ಅಮ್ಮಾ ಸಿಂಹಗಡವು ಲಭಿಸಿತಾದರೂ ಸಿಂಹವನ್ನು ಕಳೆದುಕೊಂಡೆವು" ಎಂದು ವಿಲಪಿಸಿದ.

ಜಿಜೀಬಾಯಿ ಕುಮಾರನನ್ನು ಸಮಾಧಾನಪಡಿಸುತ್ತಾ "ಶಿವಾ, ತಾನಾಜಿ ಶಾಶ್ವತವಾದ ಕೀರ್ತಿ ಪಡೆದು ಮಿಕ್ಕ ಮಹಾರಾಷ್ಟ್ರ ವೀರರಿಗೆ ಮಾರ್ಗದರ್ಶಕನಾದ" ಎಂದು ಧೈರ್ಯಪೂಡಿದಳು.

ಶಿವಾಜಿ ಬಾಬೂಜಿಗೆ ವಿವಾಹ ನಡೆಸಿ ಕೆಲವು ಜಹಗೀರುಗಳನ್ನು ಉಡುಗೊರೆಯಾಗಿ ಕೊಟ್ಟು, ವಂಶಪಾರಂಪರ್ಯವಾಗಿ ದರ್ಬಾರಿನಲ್ಲಿ ಕೆಲವು ಗೌರವಗಳನ್ನು ಪಡೆಯುವ ಹಕ್ಕುಗಳನ್ನು ಪ್ರಸಾದಿಸಿದ.





# ಭಯಗ್ರಸ್ಥರು

**ಸು**ಮಾರು ಇನ್ನೂರು ವರ್ಷಗಳ ಕೆಳಗೆ ಮಲೆಯಾಳದೇಶದಲ್ಲಿ ತೇಲಂಗೋಡು ಗ್ರಾಮದಲ್ಲಿ ಪಾರ್ವತಮ್ಮನೆಂಬ ಒಬ್ಬ ಮಹಾಸಾಧ್ವಿ ಇದ್ದಳು. ಆಕೆಯ ಗಂಡ ರಾಮುಕುಟ್ಟಿ ರಾಜನ ಆಸ್ಥಾನದಲ್ಲಿ ಒಬ್ಬ ಉದ್ಯೋಗಿ. ಒಂದು ಸಾರಿ ಆತನು ಆಸ್ಥಾನಕ್ಕೆ ಹೋದರೆ ಮತ್ತೆ ಯಾವಾಗ ಮನೆಗೆ ಬರುವನೋ ಹೇಳುವುದು ಅಶಕ್ಯವಾಗಿತ್ತು.

ಪಾರ್ವತಮ್ಮನಿಗೆ ಸುಬ್ರಹ್ಮಣ್ಯೇಶ್ವರನೆಂದರೆ ತುಂಬಾ ಭಕ್ತಿ. ಊರಾಚೆಯಿದ್ದ ಸುಬ್ರಹ್ಮಣ್ಯೇಶ್ವರನ ದೇವಾಲಯಕ್ಕೆ ಹೋಗಿ ದಿನಾ ಆಕೆ ಮೈಮರೆತು ಪ್ರಾರ್ಥನೆಮಾಡುವಳು "ಸ್ವಾಮೀ, ಸುಬ್ರಹ್ಮಣ್ಯ, ನಿನ್ನ ದರ್ಶನ ನನಗೆ ಕೊಡಲಾರೆಯಾ? ನಾನು ಸಮರ್ಪಿಸುವ ಪ್ರಸಾದಗಳನ್ನು ಸ್ವೀಕರಿಸಲಾರೆಯಾ?" ಎಂದು ದೇವರನ್ನು ಪರಿಪರಿಯಾಗಿ ಬೇಡಿಕೊಳ್ಳುವಳು.

ಹೀಗೆ ಆಕೆ ದಿನಾ ಪ್ರಾರ್ಥಿಸುವುದನ್ನು ಗುಡಿಯ ಪೂಜಾರಿ ನೋಡಿ, ಆಕೆಯ ಮುಗ್ಧತೆಗೆ ಆತನು ಒಳಗೊಳಗೇ ನಗುತ್ತಿದ್ದನು. ಒಂದು ದಿನ ಆಕೆ ಯಥಾಪ್ರಕಾರ ಪ್ರಾರ್ಥಿಸುತ್ತಿರಲು ಪೂಜಾರಿ ವಿಗ್ರಹದ ಹಿಂದೆ ಅವಿತಿಟ್ಟುಕೊಂಡು "ಭಕ್ತಳೇ ನಿನ್ನ ಸೇವೆಗೆ ಮೆಚ್ಚಿದೆ. ಇಂದು ಹೊತ್ತು ಮುಳುಗುವ ವೇಳೆಗೆ ನಿನ್ನ ಕೋರಿಕೆಯನ್ನು ತೀರಿಸುವೆನು" ಎಂದು ಗಂಭೀರವಾಗಿ ನುಡಿದ.

ದೇವರೇ ಆ ಮಾತುಗಳನ್ನು ಆಡಿದನೆಂದು ನಂಬಿ ಪಾರ್ವತಮ್ಮ ತುಂಬಾ ಸಂತೋಷಪಟ್ಟಳು. ಕೂಡಲೇ ಮನೆಗೆ ಹೋಗಿ ಭಕ್ತಿಯಿಂದ ಮನೆಯನ್ನೆಲ್ಲಾ ಶುಭ್ರಮಾಡಿ ಪಂಚಭಕ್ಷ್ಯಪರಮಾನ್ನಗಳನ್ನು ಸಿದ್ಧಪಡಿಸಿ, ದೇವರ ಆಗಮನಕ್ಕಾಗಿ ಕಾದಿದ್ದಳು.

ಅಷ್ಟರಲ್ಲಿ ಸಾಯಂಕಾಲವಾಗುವ ವೇಳೆಗೆ ಒಬ್ಬ ಭಿಕ್ಷುಕನು—ಅವರನ್ನು ಆ ದೇಶದಲ್ಲಿ ಪಂಡಾರಂ ಎಂದು ಕರೆಯುವರು—'ಜೈ ಸುಬ್ರಹ್ಮಣ್ಯ' ಎಂದೆನ್ನುತ್ತ ಅಲ್ಲಿಗೆ ಬಂದ. ಆತನನ್ನು ಕಂಡಕೂಡಲೇ ದೇವರು ಈ ರೂಪದಲ್ಲಿ ಬಂದಿರಹುದೆಂದು ಊಹಿಸಿ "ಬನ್ನಿ,

ಎಸ್. ಗೋಪಿ, ಕುಂಬಳೆ





ಸ್ವಾಮಿ. ಹೀಗೆ ದಯಮಾಡಿಸಿ, ಈ ದೀನಳ ಆತಿಥ್ಯವನ್ನು ಸ್ವೀಕರಿಸಿ" ಎಂದು ಕರೆದಳು. ಆ ಪಂಡಾರಿ ಚಕಿತನಾದ. 'ನಾನು ಭಿಕ್ಷುಕ" ಎಂದು ಎಷ್ಟು ಹೇಳಿದರೂ ಆಕೆ ಕೇಳದೆ ನಿರ್ಬಂಧಪಡಿಸಲು, ಗತ್ಯಂತರವಿಲ್ಲದೆ ಅವನು ಒಳಗೆ ಪ್ರವೇಶಿಸಿದ.

ಆ ಭಿಕ್ಷುಕನಿಗೆ ಮಣೆ ಹಾಕಿ ಕೂರಿಸಿ, ಸೊಗುಸಾದ ಊಟ ಹಾಕಿದಳು. ಅವನು ಸಿಕ್ಕಿದ್ದೇ ಸಾಕೆಂದು ಕಂಠ ಪೂರ್ತಿ ಹೊಡೆದ. ಯಾರಾದರೂ ಬಂದು ತನ್ನನ್ನು ನೋಡಿದರೆ ಪ್ರಮಾದ ಸಂಭವಿಸಬಹುದೆಂದು ಒಂದುಕಡೆ ಭಯಪಡುತ್ತಲೇ ಊಟ ಮುಗಿಸಿದ. ಭಿಕ್ಷುಕನು ಊಟ ಮಾಡುವಾಗ ಆಕೆ ಭಕ್ತಿಯಿಂದ ಗಾನಮಾಡುತ್ತಿದ್ದಳು.

ಅಷ್ಟರಲ್ಲಿ ಹೊತ್ತು ಮುಳುಗುವುದನ್ನು ನೋಡಿ ಪಾರ್ವತಮ್ಮ ದೀಪಾರಾಧನೆ ಮಾಡಿದಳು. ಆಗ "ಓ ನನ್ನ ಭಕ್ತಳೇ ಬಾಗಿಲು ತೆಗೆ" ಎಂಬ ಮಾತುಗಳು ಕೇಳಿಬಂದುವು. ಬಾಗಿಲು ತೆಗೆದು ನೋಡಿದರೆ ವಿಭೂತಿಯನ್ನು ಧಾರಾಳವಾಗಿ ಹಚ್ಚಿಕೊಂಡಿದ್ದ ಗುಡಿಪೂಜಾರಿ ಕಾಣಿಸಿದ. "ಓಹೋ, ಈಗ ಬಂದವರು ನಿಜವಾಗಿ ದೇವರು. ಹಿಂದಿನಾತ ಬಿಕ್ಷುಕನೇ ಸರಿ" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ ಪಂಡಾರಿಯನ್ನು ಕತ್ತಲಾವರಿಸಿದ್ದ ಅಟ್ಟದ ಮೇಲೆ ಹತ್ತಿಸಿದಳು ಪಾರ್ವತಮ್ಮ.

ಪೂಜಾರಿಯನ್ನು ಅತಿ ಭಕ್ತಿಯಿಂದ ಒಳಗೆ ಕರೆದುಕೊಂಡು ಬಂದು ಆತನಿಗೆ ಸಮಸ್ತವಾದ ಉಪಚಾರಗಳನ್ನು ಮಾಡಿ ಸತ್ಕರಿಸಿದಳು. ಈಗಲೂ ಈ ಸ್ವಾಮಿ ಮೆಚ್ಚಲೆಂದು ಭಕ್ತಿಭಾವದಿಂದ ಗಾನ ಮಾಡಿದಳು.

ಆ ಸಮಯಕ್ಕೆ ಹೊರಗೆ ಕುದುರೆ ಬರುತ್ತಿರುವ ಶಬ್ದ ಕೇಳಿಸಿತು. ಹೊರಗೆ ಹೋಗಿ ನೋಡಲು ಕುದುರೆಯ ಮೇಲೇರಿ ಬರುತ್ತಿದ್ದಾತ ತನ್ನ ಪತಿ! ಕೂಡಲೇ ಆಕೆ ಪೂಜಾರಿಗೆ ನಮಸ್ಕಾರಮಾಡಿ "ಸ್ವಾಮಿ, ನನ್ನ ಗಂಡನಿಗೆ ದೇವರೆಂದರೆ ವಿಶ್ವಾಸವಿಲ್ಲ. ಬಹಳ ಮುಂಗೋಪಿ! ಅವರು ಶಾಂತರಾಗುವ ವರೆವಿಗೂ ನೀವು ಆ ಅಟ್ಟದಮೇಲೆ ಅಡಗಿರಿ" ಎಂದು ಆತನನ್ನು ಸಹ ಅಟ್ಟಕ್ಕೇರಿಸಿದಳು.

ಓಡಿಹೋಗಲು ದಾರಿ ದಿಕ್ಕು ತೋಚದೆ ಆ ಪೂಜಾರಿ ಗೊಣಗುತ್ತಾ ಅಟ್ಟದಮೇಲೆ



ಹೋಗಿ ಒಂದು ಮೂಲೆಯಲ್ಲಿ ಮಲಗಿಕೊಂಡ. ಪಂಡಾರಂಗೆ ಹೊಟ್ಟೆ ತುಂಬಿದ್ದರಿಂದ ನಿದ್ದೆ ಹತ್ತಿಬಿಟ್ಟಿತ್ತು. ಪೂಜಾರಿ ಬಂದ ವಿಷಯವೇ ಅವನಿಗೆ ತಿಳಿಯದು. ಮತ್ತೆ ಸ್ವಲ್ಪ ಹೊತ್ತಿಗೆ ಪೂಜಾರಿಗೂ ನಿದ್ದೆ ಬಂದುಬಿಟ್ಟಿತು.

ಪಾರ್ವತಮ್ಮನ ಗಂಡ ಊಟಮಾಡುತ್ತಾ "ಏನಿದು ಅಟ್ಟಹಾಸ" ಎಂದು ಕೇಳಿದ. ಅದಕ್ಕೆ ಆಕೆ ಮಂದಹಾಸ ಬೀರಿ "ನೀವಿಂದು ಬರುವಿರೆಂದು ನನಗೆ ರಾತ್ರಿ ಕನಸುಬಿತ್ತು. ಅದಕ್ಕೆಂತಲೇ ಇವೆಲ್ಲವನ್ನೂ ಮಾಡಿದೆ" ಎಂದು ಸಮಾಧಾನ ಹೇಳಿದಳು. ಆತನು ಸಂಪ್ರೀತನಾಗಿ, ವಿಶ್ರಾಂತಿ ಪಡೆದು, ನಿದ್ದೆಮಾಡಿದ.

ಅರ್ಧರಾತ್ರಿ ಆಯಿತು.

ಅಪೂರ್ವವಾದ ಮೃಷ್ಟಾನ್ನ ಭೋಜನ ಮಾಡಿದ್ದ ಪಂಡಾರಂಗೆ ಬಾಯಾರಿಕೆ ಆಯಿತು. "ನೀರು, ನೀರು" ಎಂದು ಗಟ್ಟಿಯಾಗಿ ಕೂಗಿದ. ಈ ಕೂಗಾಟ ಪಾರ್ವತಮ್ಮನ ಗಂಡನ ಕಿವಿಗೆ ಬಿದ್ದಿತು. ಆತ "ಏನೇ ಅದು" ಎಂದು ಕೇಳಿದ.

ಅದಕ್ಕೆ "ನಾವು ಪಿತೃದೇವತೆಗಳಿಗೆ ಮಾಡಬೇಕಾದ ಕರ್ಮಗಳನ್ನು ಆಚರಿಸುತ್ತಿಲ್ಲವಷ್ಟೆ. ಅದರಿಂದಲೇ ಅವರು ಎರಡು ದಿನಗಳಿಂದ ಈ ರೀತಿ ಅರ್ಧರಾತ್ರಿಯಲ್ಲಿ ಬಂದು ಗಲಭೆ ಮಾಡುತ್ತಿರುವರು" ಎಂದು ಸಮಯೋಚಿತವಾಗಿ ನುಡಿದಳು. ಆಗ ರಾಮುಕುಟ್ಟಿ ಮೇಲೆ ಕೈ ಜೋಡಿಸಿ "ಓ ಹಿರಿಯರೇ, ಇನ್ನು ಮೇಲೆ ನಿಮಗೆ ನಡೆಯಬೇಕಾದ ಕರ್ಮಗಳನ್ನು




ಯಥಾವಿಧಿಯಾಗಿ ನಡೆಯಿಸುವೆನು. ಮನ್ನಿಸಿ ಕೃಪೆತೋರಿ" ಎಂದು ಪ್ರಾರ್ಥಿಸಿದ.

ಅಟ್ಟದಮೇಲಿದ್ದ ಪಂಡಾರಂಗೆ ಬಾಯಾರಿಕೆ ಅತಿಯಾದುದರಿಂದ "ನೀರು, ನೀರು" ಎಂದು ಮತ್ತೆ ಗಟ್ಟಿಯಾಗಿ ಅರಚಿದ.

ಆಗ ಪಾರ್ವತಮ್ಮ ಅಟ್ಟದ ಕಡೆ ತಿರುಗಿ "ಓ ದೇವರೇ ಪೂರ್ವದಿಕ್ಕಿನಲ್ಲಿ ತೆಂಗಿನಕಾಯಿದೆ. ಅಲ್ಲೇ ಒಂದು ರುಬ್ಬುಗುಂಡು ಇದೆ. ಅದರಮೇಲೆ ಕಾಯಿ ಹೊಡೆದುಕೊಂಡು, ಆ ನೀರು ಕುಡಿದು ಶಾಂತರಾಗಿ" ಎಂದು ಬೇಡಿಕೊಂಡಳು. ಈ ಮಾತುಗಳ ಅರ್ಥ ಗ್ರಹಿಸಿದ ಪಂಡಾರಂ ಅಟ್ಟದಮೇಲೆ ಪೂರ್ವ ದಿಕ್ಕಿನಲ್ಲಿ ಹುಡುಕಾಡಲು ಆಕೆ ಹೇಳಿದಂತೆಯೇ ಆತನ ಕೈಗೆ ಒಂದು ತೆಂಗಿನಕಾಯಿ ಸಿಕ್ಕಿತು. ತರು





ವಾಯು ಕಲ್ಲಿಗಾಗಿ ತಡಕಾಡಲು, ಮಲಗಿದ್ದ ಪೂಜಾರಿಯ ಬೋಳು ತಲೆ ಆತನ ಕೈಗೆ ಸೋಂಕಿತು. ಅದೇ ರುಬ್ಬುಗುಂಡಿರಬೇಕೆಂದು ಕಾಯನ್ನು ಆ ತಲೆಯಮೇಲೆ ಹೊಡೆದ.

ತಲೆ ಸೀಳಿ "ಅಯ್ಯೋ ಅಯ್ಯೋ" ಎಂದು ಪೂಜಾರಿ ಕಿರುಚಿದ. ಆ ಕತ್ತಲೆಯಲ್ಲಿ ಏನೂ ಕಾಣಿಸದೆ ನೆಲದಮೇಲೆ ತಡಕಾಡುತ್ತಿರಲು ಆತನಿಗೆ ಪಂಡಾರಂನ ಕೈಸಿಕ್ಕಿತು. ಇಬ್ಬರೂ ಆಗಹೊಡೆದಾಟಕ್ಕೆ ಇಳಿದರು.

ಕೆಳಗಿದ್ದ ರಾಮುಕುಟ್ಟಿ ಈ ಗಲಭೆ ಶಬ್ದಗಳನ್ನು ಕೇಳಿ ಭಯಪಟ್ಟ. ಅವನಿಗೆ ಏನು ಮಾಡಲಿಕ್ಕು ತೋರಲಿಲ್ಲ. ಹೆಂಡತಿಯ ಮುಖ ನೋಡಿದ.

ಪಾರ್ವತಮ್ಮ ಕೂಡಾ ಹೆದರಿ "ಅಯ್ಯೊ, ದೇವತೆಗಳಿಗೆ ಕೋಪ ಬಂದುಬಿಟ್ಟಿದೆ. ನೀವು ಮನೆಗೆ ಬರುವವರೆವಿಗೂ ಶಾಂತರಾಗಿರಿ ಎಂದು ದಿನಾ ಬೇಡಿಕೊಳ್ಳಲು ಸುಮ್ಮನಿರುತ್ತಿದ್ದರು. ನೀವಿಂದು ಬಂದಿರುವ ವಿಷಯ ತಿಳಿದುಕೊಂಡದ್ದರಿಂದ ಅವರು ಆಗ್ರಹಗೊಂಡಂತಿದೆ" ಎಂದಳು.

ಅಷ್ಟರಲ್ಲಿ ಅಟ್ಟದಮೇಲಿಂದ ಪಂಡಾರಂ-ಪೂಜಾರಿ ಧಬಾರನೆ ಕೆಳಗೆ ಬೀಳುವುದನ್ನು ಕಂಡ ರಾಮುಕುಟ್ಟಿ.

ಮತ್ತೆ ಕೇಳುವುದೇನು? ಅವರನ್ನು ನೋಡಿ ನಡಗುತ್ತಾ ಹೊರಕ್ಕೆ ಬಂದು ತನ್ನ ಕುದುರೆ ಹತ್ತಿ ದೌಡಾಯಿಸಿದ. ಈ ತೊಂದರೆಯಲ್ಲಿ ಕಂಗೆಟ್ಟು ಆತನು ಚಬುಕಿನಿಂದ ಕುದುರೆಯನ್ನು ಹೊಡೆದರೆ ಚಾವಟಿಯ ಕೊನೆ ಅವನ ಬೆನ್ನಿಗೇ ತಗಲುತಿತ್ತು!

ದೇವತೆಗಳೇ ತನ್ನನ್ನು ಹೀಗೆ ಹಿಂಬಾಲಿಸುತ್ತಿರುವರೆಂದು ಭಾವಿಸಿ "ಸ್ವಾಮಿ, ನನ್ನನ್ನು ಬಿಟ್ಟುಬಿಡಿ, ನಿಮಗೆ ಪ್ರತಿವರ್ಷ ಕರ್ಮಗಳನ್ನು ಸಾಂಗವಾಗಿ ಮಾಡುತ್ತೇನೆ" ಎಂದು ಬೇಡಿಕೊಳ್ಳುತ್ತಾಹೋಗುತ್ತಿದ್ದ.

ಈ ಗೊಂದಲದಲ್ಲಿ ಪಂಡಾರಂ ಮತ್ತು ಪೂಜಾರಿ ಅವರವರ ದಾರಿ ಹಿಡಿದರು. ಪಾಪ, ಪಾರ್ವತಮ್ಮ ಏನು ಮಾಡುವಳು? ನಂಬಿದ ದೇವರ ಲೀಲೆಗಳಿಗೆ ತುಂಬಾ ಬೆರಗಾದಳು. ಆಕೆಯ ದೇವರ ಭಕ್ತಿ ಕಡೆಗೆ ಈ ರೀತಿಯಾಗಿ ಪರ್ಯವಸಾನ ಹೊಂದಿತು.



# ಮೂವರು ಗೆಳೆಯರು (ಹಿಂಬದಿಯ ಚಿತ್ರ)

ಪಾಪ, ಗುಡಿಸಲಿನೊಳಗೆ ಕೊರಪಣ್ಣ ಒಬ್ಬನೇ ಆಗಿಬಿಟ್ಟ. ಕೋತಿಯ ಗೆಳೆತನದಿಂದ ಅದು ಮಾಡಿದ ಚೇಷ್ಟೆಗಳಿಂದ ತುಂಬಾ ನೊಂದುಬಿಟ್ಟ. ಅದು ಚೆಲ್ಲಾ ಪಿಲ್ಲಿ ಮಾಡಿದ ವಸ್ತುಗಳನ್ನೆಲ್ಲ ಎತ್ತಿ ಎತ್ತಿ ಓರಣಗೊಳಿಸ ತೊಡಗಿದ. ಮತ್ತೆ ಆ ಕೋತಿ ಗೆಳೆಯ ಅವನನ್ನು ಬಿಟ್ಟಪಾಡುಂಟೆ?

ಸ್ವಲ್ಪ ಹೊತ್ತಿನಮೇಲೆ ಮರದ ಕೊಂಬೆಯಿಂದ ಆ ಕೋತಿ ಮತ್ತೆ ಹಾರಿ ಕೊಂಡು ಬಂದು ಬಾಗಿಲು ಬಡೆಯಿತು. "ಸಾಕು ಸಾಕು; ನೀನು ಮಾಡಿದ ತಂಟೆ ಹೋಗು ಹೋಗು; ನಿನಗೆ ಬಾಗಿಲು ತೆರೆಯುವುದಿಲ್ಲ" ಎಂದು ಒಳಗಿನಿಂದ ಕೊರ ಪಣ್ಣನ ಶಬ್ದ ಕೋತಿಯ ಕಿವಿಗೆ ಕೇಳಿ ಬಂತು.

ಆದುದರಿಂದ ಕೋತಿ ಈ ದಿನ ಮರದಮೇಲೆ ಮಳೆಯಲ್ಲಿ ನೆನೆದುಕೊಂಡೇ ಕಾಲಕ್ಷೇಪ ಮಾಡಬೇಕಾಗಿ ಬಂತು. ಇತ್ತ ಗುಡಿಸಲಿನೊಳಗೆ ಗಿಳಿ ಸುಮ್ಮನಿರಲಿಲ್ಲ. ಕೋತಿ ಚೇಷ್ಟೆಗೆ ಅಳಿದುಳಿದ ಜಾಡೀ ಪಾತ್ರೆಗಳನ್ನು, ಗಿಳಿ ತಟಪಟನೆ ಅತ್ತಿತ್ತ ಹಾರಾ ಡುತ್ತ ಒಡೆದು ಹಾಕಿತು. ಮೇಲೆ ತೂಗಾಡಿಸಿದ ಖರ್ಜೂರದ ಗೊನೆಯನ್ನು ಕೊಕ್ಕಿ ನಿಂದ ಚುಚ್ಚಿಚುಚ್ಚಿ ಹಾಳು ಮಾಡಿತು. ಕೊರಪಣ್ಣ ಭಯಪಟ್ಟು ಗಿಳಿ ಗೆಳೆಯನನ್ನು ಓಡಿಸಲು ನೋಡಿದ. ಅದು ಹೋಗಲಿಲ್ಲ.

ಆದರೆ ಆ ಬಾಗಿಲಿಗಿರುವುದು ಹಲಗೆಯಲ್ಲ, ಹುಲಿಚರ್ಮ. ಸ್ವಲ್ಪ ಹೊತ್ತಿಗೆ ಗಿಳಿ ಹುಚ್ಚು ಹಿಡಿದಂತೆ ಆ ಚರ್ಮವನ್ನು ಕೊಕ್ಕಿನಿಂದ ಚುಚ್ಚಿ ರಂಧ್ರಮಾಡಿ ಅದರಲ್ಲಿ ತೂರಿ ತುರ್‍ರನೆ ಹಾರಿಹೋಯಿತು! ಅದು ಮತ್ತೆ ಮರಳಿ ಬಾರದಂತೆ ಕೊರಪಣ್ಣ ಆ ರಂಧ್ರಕ್ಕೆ ಒಂದು ತಾಳೇಯೋಲೆಯನ್ನು ಅಡ್ಡ ಇಟ್ಟ.

ಈಗ ಕೊರಪಣ್ಣನಿಗೆ ಕೈತುಂಬಾ ಕೆಲಸವಾಯಿತು. ಕೋತಿ ಗೆಳೆಯ ಉರುಳಿಸಿ ಹಾಕಿದ್ದೂ, ಗಿಳಿ ಗೆಳೆಯ ತಾರುಮಾರು ಮಾಡಿದ್ದೂ ಎಲ್ಲಾ ಎತ್ತಿ ಆಯಾ ಸ್ಥಾನಗಳಲ್ಲಿ ಇಡುವ ಕೆಲಸಕ್ಕೆ ತಗುಲಿಕೊಂಡ.

ಅಷ್ಟರಲ್ಲಿ ಅಡವಿಗೆ ಹೋಗಿದ್ದ ಕೊರಪಣ್ಣನ ತಂದೆಯೂ ತಾಯಿಯೂ ಬಂದು ಬಿಟ್ಟರು. ಒಳಗಿನ ಗಂದರಗೋಳವನ್ನು ನೋಡಿದರು. "ಚೆನ್ನಾಗಿದೆ ಹುಡುಗಾ. ಕಂಡಕಂಡವರಲ್ಲೆಲ್ಲಾ ಗೆಳೆತನ ಮಾಡಬಾರದಂತ ಹೇಳಲಿಲ್ಲವೇ ನಾನು! ಸಿಕ್ಕಿದವ ರೆಲ್ಲಾ ನಿಜವಾದ ಸ್ನೇಹಿತರಲ್ಲಾಂತ ಎಷ್ಟುಬಾರಿ ಹೇಳಿದೆ? ನಿನಗೆ ಕೊಂಚವೂ ಬುದ್ಧಿಯಿಲ್ಲ. ನಿನ್ನನ್ನು ನಂಬಿ ಮನೆಬಿಟ್ಟು ಹೋದದ್ದಕ್ಕೆ ಸರಿಯಾಗಿ ಮಾಡಿದಿ" ಎಂದು ಕೊರಪಣ್ಣನನ್ನು ಮೂದಲಿಸ ತೊಡಗಿದರು.




# ನೀರಿಗೆಬಿದ್ದ ಲೋಭಿ

ಸಂತೆಬೇರ ಮುಗಿಸಿ ಹಣದ
ಬೊಂತೆಯೊಡನೆ ಸುಬ್ಬಸೆಟ್ಟಿ
ಹಿಂತಿರುಗಲ್ ಹೊಳೆಲಿ ನೀರು
ಎಂತೊ ಹೆಚ್ಚಿ ಓಡುತಿತ್ತು.

ದೋಣಿ ದುಡ್ಡು ಮಿಗಿಸಲೆಂದು
ಕಾಣಲಾಗ, ತೇಲಿಯೊಂದು
ಮರದ ತುಂಡು ತೇಲಿಬರಲ್
ಪರಮಲೋಭಿ ಹಿಡಿದದರಲ್

ಏರಿಸಾರೆ ನಡುನೀರೋಳ್
ಭಾರಿ ಸುಳಿಗೆ ತಿರುಗಿ ಒಡಲ್
ನೀರ್ಗೆ ಬಿದ್ದು ಗಂಟು ಮುಳುಗಿ
ಹೇಗೋ ಈಜಿ ಉಳಿದ ಬದುಕಿ.

ದುಡ್ಡು ಹೋದ ನಷ್ಟ ನೆನೆದು
ದೊಡ್ಡಾಮರ ತುಂಡನೆಳೆದು
ಒಡೆದು ಮಾರಿ ದುಡ್ಡು ಗೈದ !
ಒಡಲ ಕ್ಯಾದ ಮರವ ತೊಡೆದ !!

'ಸುಂದರಿ'



## ರಾಜೂನ ತಂತ್ರ

(ಕೆ. ಟಿ. ದಿವಾಕರ)

ಆದಿನ ನನಗೆ ಶಾಲೆಗೆ ಹೋಗಲಿಕ್ಕೇ ಮನಸ್ಸಿಲ್ಲ. ಮನೇಲಿ ನೆಂಟರು ಬಂದಿದ್ರು. ಅವರಿಗಾಗಿ ಮಾಡಿದ ಭಕ್ಷ್ಯಗಳೆಲ್ಲಾ ಮತ್ತೆ ನನಗೆ ಇರುತ್ತೋ ಇಲ್ಲವೋ?...ಎಂದು ಚಿಂತಿಸುತ್ತಾ ಅಪ್ಪನ ಭಯದಿಂದ ಶಾಲೆಗೆ ಹೋಗ್ತಿದ್ದೆ.

ದಾರೀಲಿ ನನ್ನ ಮಿತ್ರ ರಾಜು ಸಿಕ್ಕಿ "ಏನೋ ಮುಖ ಬಾಡಿಸಿಕೊಂಡಿದ್ದೀಯಾ?" ಅಂತ ಕೇಳಿದ. ಏನೂ ಮುಚ್ಚುಮರೆ ಮಾಡದೆ ನನ್ನ ಸಂಕಟ ಹೇಳಿ, ಆ ಭಕ್ಷ್ಯಗಳ ಪಟ್ಟೀನೂ ಓದಿದೆ. ಕೇಳಿ ಅವನ ಬಾಯಿಲೂ ನಿರೂರಿತು. ಹೇಳಿದ: "ಹನ್ನೊಂದು ಗಂಟೆಗೆ ಸರಿಯಾಗಿ ಊಟಕ್ಕೆ ನೀನು ಹೋಗ್ಬೇಕು. ಸರಿತಾನೇ? ನನ್ನನ್ನೂ ನಿನ್ನ ಜತೆಗೆ ಕರೆದೊಯ್ಯುವುದಾದರೆ ಮಾಡ್ತೇನೆ ಉಪಾಯ" ಅಂದ. "ಸರಿ ಹೇಗೆ ಉಪಾಯ?" ಅಂತ ನಾನು ಕೇಳಿದೆ. "ಹತ್ತುಗಂಟೆಗೆ ನೀನು ಕಣ್ಣೀರು ಸುರಿಸಿ ಅತ್ತುಬಿಡು, ಮತ್ತೆಲ್ಲಾ ನಾನು ನೋಡಿಕೊಳ್ಳುತ್ತೇನೆ" ಅಂದ ಮಹಾನುಭಾವ. "ಸುಮ್ಮನೆ ಕಣ್ಣೀರು ಹೇಗಪ್ಪಾ–" ಅಂತ ನಾನು ಹಿಂಜರಿದೆ. "ಅದನ್ನೂ ನಾನೇ ಬರಿಸುತ್ತೇನೆ ನೋಡುತ್ತಿರು" ಅಂದ.

ಕ್ಲಾಸಿನಲ್ಲಿ ಹತ್ತುಗಂಟೆಯಾಯಿತು. ಮಾಸ್ತ್ರು ಬೋರ್ಡಿಗೆ ಮುಖಹಾಕಿ ಏನೋ ಬರೆಯುತ್ತಿದ್ದರು. ರಾಜು ಫಕ್ಕನೆ ನನ್ನ ಕಣ್ಣಿಗೆ ಉಗುರಿನಿಂದ ಗೀರಿಬಿಟ್ಟ. ನನಗೆ ನಿಜವಾಗಿಯೂ ಅಳು ಬಂತು. ಕೂಡಲೇ ರಾಜು ಎದ್ದು ನಿಂತು, "ಸಾರ್, ಕಿಟ್ಟೂ ಅಳ್ತಾನೆ. ಹೊಟ್ಟೇ ನೋಯ್ತಂತೆ, ತಲೇ ಸಿಡೀತಂತೆ, ಕಣ್ಣು ಉರೀತಂತೆ" ಅಂದ. ಮಾಸ್ತ್ರು ನೋಡಿ, "ಅಯ್ಯೋ! ಪಾಪ! ಏನು ತಿಂದೆಯೋ ಬೆಳಿಗ್ಗೆ. ಹೋಗು. ಮನೆಗೆ ಹೋಗಿ ಸುಧಾರಿಸಿಕೊಂಡು ಮಧ್ಯಾಹ್ನದ ಮೇಲೆ ಬಾ" ಎಂದರು.

ನಾನು ಹೊರಟೆ ಬಾಗಿಲ ಹೊರಗೆ. ಆಗ ರಾಜು [illegible] 'ತಲೆತಿರುಗಿ ದಾರೀಲಿ ಬಿದ್ದುಬಿಡ್ತಾನೇನೋ ಸಾರ್. ನಾನು ಹೋಗಿ ಮನೇ[illegible]ಟ್ಟು ಬಂದುಬಿಡ್ತೇನೆ" ಅಂದ. "ಸರಿ" ಎಂದರು ಮಾಸ್ಟರು. ಆನಂದದಿ[illegible]ೀ ಮನೆಗೆ ಹೊರಟೆವು. ಆಗಲೂ ನನಗೊಂದು ಸಂದೇಹ: "ಬೇಗ ಮನೆಗೆ ಬಂದದ್ದಕ್ಕೆ ಅಪ್ಪ ಬಯ್ತಾರೇನೋ ಅಂತ. "ನೆಂಟರ ಎದುರು ಬಯ್ಯಲಿಕ್ಕಿಲ್ಲ" ಅಂತ ಧೈರ್ಯ ಹೇಳಿದ ರಾಜು.

ತಂದೆ ಕೇಳಿಯೇಬಿಟ್ಟರು. "ಏನೋ ಇಷ್ಟುಬೇಗ ಬಂದಿ?" ಅಂತ. ಕೂಡಲೇ ರಾಜು: "ಹಸಿವೆಯಿಂದ ತಲೆತಿರುಗಿ ಬೀಳಲಿಕ್ಕಿದ್ದ ಕ್ಲಾಸಿನಲ್ಲೇ. ಇವನ ಮನೇಲಿ ಮಾಡಿಬಾ ಅಂತ ಮಾಸ್ತ್ರು ನನ್ನನ್ನೂ ಕಳಿಸಿದ್ರು" ಅಂದ. ತಂದೆ ಮುಗುಳುನಗುತ್ತ "ಉಂಡು ಹೋಗಿ ಇಬ್ಬರೂ" ಅಂದರು. ನಮ್ಮಿಬ್ಬರಿಗೂ ಭರ್ಜರಿ ಭಕ್ಷ್ಯದೂಟ!

## ನಾನೇ ಬಂಗಾರ

ದೇವರ ಕೊರಳಲಿ ಚೆಲುವಿನ ಹಾರದಿ
ಮೆರೆಯುವೆ ನಾನಾರು?
ಅಣ್ಣನ ನೆರಳಲಿ ಅಕ್ಕನ ಶಿರದಲಿ
ಸಿಕ್ಕಿಹೆ ನಾನಾರು?
ಪಾಪನ ಕಿವಿಯಲಿ ಅಮ್ಮನ ಮೂಗಿಲಿ
ಮಿನುಗುವೆ ನಾನಾರು?
ಮಣ್ಣಲಿ ಮಲಗಿ ಸೂರ್ಯನ ಬೆಳಕಲಿ
ಮಿಂಚುವೆ ನಾನಾರು?
ಸೂರ್ಯೋದಯದಾ ಬಾನಿನ ಬಣ್ಣದಿ
ಹೊಳೆಯುವ ನಾನಾರು?

ಬೆಟ್ಗೇರಿ "ಆಝಾದ"

## ಚುಟಕಗಳು

ತಮ್ಮ ವಾಸು ಇನ್ನೂ ಕೂಸು.
ಅಮ್ಮನನ್ನು ಬೇಡ್ವ ಕಾಸು.

ಶಂಕರ ಉಂಕಿ

—•—

ಅಣ್ಣ ಬಂದ ಹಣ್ಣು ತಂದ
ಚನ್ನ ನೊಂದು ಚಾಕು ತಂದ
ಅರ್ಧಮಾಡಿ ಅರ್ಧತಿಂದ
ತಮ್ಮ ತೆಗೆದ ಹಟಾನಾ!
ಅಪ್ಪ ಹೊಡೆದ ಫಟಾನಾ!!

ಗೋ. ಗಾ. ಹವಾಲದಾರ

## ಜಟ್ಟಿ

ಒಬ್ಬ ಜಟ್ಟಿ—ಹೆಸರು ಭಟ್ಟಿ
ತಿಂದು ರೊಟ್ಟಿ—ದೇಹ ಗಟ್ಟಿ
ಸೊಂಟಕಟ್ಟಿ—ಬಿಗಿದು ಮುಷ್ಟಿ
ಹಲ್ಲ ಹೆಟ್ಟಿ—ಭೂಮಿ ಕುಟ್ಟಿ
ಭುಜವ ತಟ್ಟಿ ಕೆಡವಿ ಮೆಟ್ಟಿ
ಗೆದ್ದುಬಿಟ್ಟ—ಜಟ್ಟಿ ದಿಟ್ಟ!

ಐ. ಗೋಪಾಲಕೃಷ್ಣರಾವ್

## ನಗೆಹನಿ

ತಂದೆ: ಮಗೂ, ನೀನು ದೊಡ್ಡವನಾದಿ. ಆಣೆಗೀಣೆ ಕೇಳ್ಬಾರ್ದೂ.
ಮಗ: ಹಾಗಾದ್ರೆ ರೂಪ್ಯಾನೇ ಕೊಟ್ಬಿಡಪ್ಪ.

—•—

ಹಳ್ಳಿಗ: ಏನೈತ್ರೀ?
ಹೋಟಲ್‌ಮಾಣಿ: ಬಿಸಿಬಿಸಿ ಇಡ್ಲೀತರ್ಲ?
ಹಳ್ಳಿಗ: ಹೂಂ.
(ಹೋಟಲಿನವ ಇಡ್ಲಿ ಚಟ್ನಿ ನೀರು ತಂದಿಟ್ಟ)
ಹಳ್ಳಿಗ: ಇದಕ್ಕೆಲ್ಲ ಹ್ಯಾಂಗ್ರೀ?
ಹೋಟಲ್: ಇಡ್ಲಿಗೆ ಎರಡಾಣೆ.
ಹಳ್ಳಿಗ: ಮತ್ತೆ ಇದಕ್ಕೆಲ್ಲ?
ಹೋಟಲ್: ಅದಕ್ಕೆಲ್ಲ ಏನಿಲ್ಲ.
ಹಳ್ಳಿಗ: ಹಾಂಗಾರೆ ನಂಗ ಇಡ್ಲೀ ಬ್ಯಾಡ್ರಿ; ಚಟ್ನೀ ನೀರೇ ಸಾಕ್ರೀ.

—•—

ಟೀಚರ್: ಇಲ್ಲಿ ಬಾರೋ ಕೃಷ್ಣಾ. ಹಲ್ಲು ಬಿಡದೆ ನನ್ನ ಮುಂದೆ ನಿಲ್ಲು.
(ಗೊಗ್ಗೆಹಲ್ಲಿನ ಕೃಷ್ಣ ಹೋಗಿ ನಿಂತ)
ಟೀಚರ್: ಹಲ್ಲು ಮುಚ್ಚಿಕೊಳ್ಳೊ. ಸಾಕ್ಷಾತ್ ಕೋತಿ ನಿಂತಿದೆ ನನ್ನ ಮುಂದೆ!
ಕೃಷ್ಣ: (ಇನ್ನಷ್ಟು ಹಲ್ಲು ಬಿಟ್ಟು) ನನ್ನ ಮುಖವೊಂದು ಕನ್ನಡಿ ಸಾರ್.

ಜಿ. ಶ್ರೀಪಾದರಾವ್

—•—

ಗುರು: ಬುಧವಾರ ಆಗುತಲೇ ಯಾವವಾರ?
ಶಿಷ್ಯ: ನಿಮ್ಮವಾರವೇ.

ಎಂ. ಪಿ. ರುಕ್ಕಮ್ಮ

—•—

ಆತ: ಏನಪ್ಪಾ ಇನ್ನೂ ಅವಿವಾಹಿತನಾಗಿದ್ದಿ?
ಈತ: ನಾನೀ ಭೂಮಿಯಲ್ಲೇ ಲಗ್ನವಾಗಲಾರೆ.
ಆತ: ಹಾಗಿದ್ದರೆ ಏರೋಪ್ಲೇನ್ನಲ್ಲಿ ಮಾಡಿಕೋ ಬೋದಲ್ಲಪ್ಪಾ?

ಬಿ. ಸಿ. ಜಯಮ್ಮ




# ಮರೆತುಹೋದ ಮದುವೆ

ಬಹಳ ಕಾಲದ ಹಿಂದೆ ಮೇವಾಡ ದೇಶದಲ್ಲಿ ಪುಂಗಳ ಎಂಬ ಪಟ್ಟಣಕ್ಕೆ ಪಿಂಗಳನೆಂಬ ರಾಜನಿದ್ದನು. ಆ ದೇಶದಲ್ಲೇ ಮತ್ತೊಂದು ಪಟ್ಟಣವಿತ್ತು. ಆ ಪಟ್ಟಣದ ಅರಸ ಸಾಮಂತಸಿಂಹ.

ಸಾಮಂತಸಿಂಹನಿಗೆ ಉಮಾದೇವಿ ಎಂಬ ಅತಿ ಚೆಲುವೆಯಾದ ಮಗಳಿದ್ದಳು. ಪಿಂಗಳನ ಶಕ್ತಿಸಾಮರ್ಥ್ಯಗಳನ್ನು ತಿಳಿದ ಸಾಮಂತಸಿಂಹನು ಆತನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುವೆನೆಂದು ಪಿಂಗಳನಿಗೆ ಸುದ್ದಿ ಕಳುಹಿಸಿದನು.

ಆದರೆ ಅದಕ್ಕೆ ಮೊದಲೇ ಉಮಾದೇವಿಯನ್ನು ಗುಜರಾತ ದೇಶದಲ್ಲಿದ್ದ ಪಾಟಣರಾಜನಿಗೂ, ಜನಾಗಢ ರಾಜನಿಗೂ ಕೊಡಬೇಕೆಂದು ನಿಶ್ಚಯವಾಗಿತ್ತು. ಆದರೆ ರಾಣಿಮಾತ್ರ ತನ್ನ ಮಗಳನ್ನು ಗುಜರಾತ ದೇಶಕ್ಕೆ ಕೊಡಲು ಇಷ್ಟಪಡಲಿಲ್ಲ.

ಒಂದುದಿನ ರಾಣಿ ಗಂಡನೊಂದಿಗೆ "ಗುಜರಾತದೇಶಕ್ಕೆ ನನ್ನ ಮಗಳನ್ನು ಕೊಡಲಾರೆ" ಎಂದು ಖಚಿತವಾಗಿ ನುಡಿದುಬಿಟ್ಟಳು. ಹೇಳಿದ ಮಾತ್ರಕ್ಕೆ ಲಾಭವೇನು? ಹಿಂದಾಗಲೇ ಮಾತುಕತೆ ನಡೆದಿದೆ. ತಪ್ಪಿಸಿಕೊಳ್ಳುವುದು ಸುಲಭಸಾಧ್ಯವಲ್ಲ. ಆದರೆ ಆಕೆ ಬುದ್ಧಿವಂತಳು. ಅದಕ್ಕೆ ಒಂದು ಉಪಾಯ ಹೂಡಿದಳು. ಪಾಟಣ ರಾಜನು ಪ್ರಯಾಣಮಾಡಿ ತಮ್ಮ ದೇಶವನ್ನು ಸೇರಲು ಸಾಧ್ಯವಾಗದ ರೀತಿಯಲ್ಲಿ ಸುಮುಹೂರ್ತವನ್ನಿಡಿಸಿ ಆಹ್ವಾನ ಕಳುಹಿಸಿದಳು.

ಆಕೆ ಹಾಗೆ ಇಡಿಸಿದ ಸುಮುಹೂರ್ತದ ಸಮಯಕ್ಕೆ ಅಲ್ಲಿ ಪಿಂಗಳನು ಮಾತ್ರ ಇದ್ದ. ಸರಿ, ಉಮೆಯನ್ನು ಪಿಂಗಳನಿಗೆ ಕೊಟ್ಟು ವೈಭವವಾಗಿ ವಿವಾಹ ಮಾಡಿದರು.

ಉಮಾದೇವಿಗೆ ಮದುವೆಯಾದ ಕೆಲವು ಕಾಲಕ್ಕೆ ಮಾರುಪಾಣಿ ಎಂಬ ಮಗಳು ಜನಿಸಿದಳು. ಆಕೆಯನ್ನು ಮಾರೂ ಎಂದು ಮುದ್ದಾಗಿ ಕರೆಯುತ್ತಿದ್ದರು. ಆ ಮಗುವಿಗೆ ಒಂದೂವರೆ ವರ್ಷವಿರುವಾಗ ಆ ದೇಶದಲ್ಲಿ ಭಾರಿ ಬರಬಂತು. ಕ್ಷಾಮಕ್ಕೆಹೆದರಿ ಪಿಂಗಳನು ತನ್ನ ಮಡದಿ ಮಕ್ಕಳೊಂದಿಗೆ, ಆ

ಪದ್ಮಾವತೀ ಶ್ಯಾಮ, ಬೊಂಬಾಯಿ



ದೇಶವನ್ನು ಬಿಟ್ಟು ಸುಭಿಕ್ಷ ಪ್ರದೇಶವಾದ ಪುಷ್ಕರ ತೀರ್ಥಕ್ಕೆ ಪ್ರಯಾಣಮಾಡಿದನು.

ನಲವೀರಗಢವನ್ನು ಪಾಲಿಸುವ ನಳನೆಂಬ ರಾಜನು ತನ್ನ ರಾಣಿ ಮತ್ತು ಮೂರು ವರ್ಷದ ಮಗನೊಂದಿಗೆ ತೀರ್ಥ ಯಾತ್ರೆ ಮಾಡುತ್ತಾ ಪುಷ್ಕರತೀರ್ಥಕ್ಕೆ ಬಂದನು. ಆ ಹುಡುಗನ ಹೆಸರು ಢೋಲಾ.

ಅಲ್ಲಿ ನಳ ಮತ್ತು ಪಿಂಗಳರಿಗೆ ಸ್ನೇಹ ಬೆಳೆಯಿತು. ಒಂದೂವರೆ ವರ್ಷದ ಮಾರು ವನ್ನು ಮೂರು ವರ್ಷದ ಢೋಲನಿಗೆ ಕೊಟ್ಟು ವಿವಾಹ ಮಾಡುವಷ್ಟು ದೂರ ಅವರ ಗೆಳೆತನ ಬೆಳೆಯಿತು! ಆತರುವಾಯ ನಳನು ತನ್ನ ರಾಣಿ ಮತ್ತು ಮಗನೊಂದಿಗೆ ತನ್ನ ರಾಜ್ಯಕ್ಕೆ ಹೊರಟುಹೋದ. ಆದರೆ ಒಂದು ವಿಚಿತ್ರ



ವಾಯಿತು. ಎಲ್ಲೋ ಒಂದು ದೂರ ಪ್ರದೇಶ ದಲ್ಲಿ ಈ ಸಂಘಟನೆ ನಡೆದಪ್ರಯುಕ್ತ ಕೆಲವು ದಿನಗಳಿಗೆಲ್ಲಾ ಈ ಮದುವೆಯಾದ ಮಾತನ್ನೇ ಮರೆತುಬಿಟ್ಟ ಆ ರಾಜ!

ಢೋಲಾ ಬೆಳೆದು ದೊಡ್ಡವನಾದ. ಈ ಮೊದಲೇ ತನಗೆ ಮದುವೆಯಾದ ವಿಷಯ ಆತನಿಗೆ ತಿಳಿಯದು. ಕೆಲವು ವರ್ಷಗಳಾದ ಮೇಲೆ ಆತನಿಗೆ ಮಾಳವದೇಶದ ರಾಜ ಕುಮಾರಿಯಾದ ಮಾಳವಣಿಯೊಂದಿಗೆ ಮದುವೆ ಆಯಿತು.

ಢೋಲನಿಗೆ ಅಶ್ವಗಳೆಂದರೆ ಬಹಳ ಪ್ರೀತಿ; ಇಷ್ಟ. ಜಾತಿ ಕುದುರೆಗಳನ್ನು ಅನೇಕರು ಬೇರೆ ಬೇರೆ ದೇಶಗಳಿಂದ ಆತನಲ್ಲಿಗೆ ತರು ವರು. ಹಾಗೇ ಒಂದುಸಾರಿ ಕುದುರೆವರ್ತ ಕನು ಮಾಳವದೇಶದಿಂದ ಬಂದು ಢೋಲನಿಗೆ ಕೆಲವು ಮೇಲುಜಾತಿಯ ಅಶ್ವಗಳನ್ನು ತೋರಿಸಿ, ಮಾರಿದನು.

ಅದೇ ಅಶ್ವವರ್ತಕನು ಸುಮಾರು ದಿನಗ ಳಾದಮೇಲೆ ಪುಂಗಳಪಟ್ಟಣಕ್ಕೆ ಹೋಗಿ ಪಿಂಗಳನೊಂದಿಗೆ ಮಾತಿನ ಸಂದರ್ಭದಲ್ಲಿ ತಮ್ಮ ರಾಜನ ಮಗಳಾದ ಮಾಳವಣಿಯನ್ನು ಢೋಲನಿಗೆ ಕೊಟ್ಟು ವಿವಾಹ ಮಾಡಿದ ವಿಷಯ ತಿಳಿಸಿದನು. ಈ ವಿಷಯ ಕೂಡಲೇ ರಾಜಕುಮಾರಿಗೆ ತಿಳಿಯಿತು. ಬಾಲ್ಯದಲ್ಲೇ ತಂದೆತಾಯಿಗಳು ಆಕೆಗೆ ಢೋಲನೊಂದಿಗೆ ಮದುವೆಯಾದ ವಿಷಯ ತಿಳಿಸಿದ್ದರಿಂದ, ಢೋಲನೇ ತನ್ನ ಪತಿಯೆಂದು ನಂಬಿದ್ದಳು,

ಮನಸ್ಸಿನಲ್ಲಿ ಅವನನ್ನೇ ಪೂಜಿಸುತ್ತಿದ್ದಳು ಆ ಸಾಧ್ವಿ. ಈಗ ಅಶ್ವವರ್ತಕನು ಬಂದು ಈ ವಿಷಯ ಹೇಳಿದಕೂಡಲೇ ಆಕೆ ದುಃಖದ ಕಡಲಿನಲ್ಲಿ ಮುಳುಗಿಬಿಟ್ಟಳು.

ಅಲ್ಲಿ ನಲವೀರಗಢ ರಾಜ್ಯದಲ್ಲಿ ಸಂಗತಿ ಸಂದರ್ಭಗಳು ಹೇಗಿವೆಯೆಂದರೆ :

ಢೋಲಾನ ತಾಯಿ ಒಂದುದಿನ ಬಾಯಿ ತಪ್ಪಿ, ಚಿಕ್ಕಂದಿನಲ್ಲಿ ಮಾರುವೊಂದಿಗೆ ಮದುವೆಯಾದ ವಿಷಯವನ್ನು ಮಗನಮುಂದೆ ಹೇಳಿದಳು. ಆ ವಿಷಯ ಕೇಳಿ ಮಾಳವಣಿ ಸವತಿಯಮೇಲೆ ವಿಷ ಕಾರಿದಳು.

ಪುಂಗಳರಾಜ್ಯದಿಂದ ಮಾರೂ ದೂತರನ್ನು ಕಳುಹಿಸಿದಳು. ಆದರೆ ಮಾರು ಕಳುಹಿಸಿದ ಸಂದೇಶ ಢೋಲನಿಗೆ ತಲಪದಂತೆ ಮಾಡಿದಳು ಮಾಳವಣಿ.

ತನ್ನ ದೂತರು ಹಿಂದಿರುಗಿ ಬಾರದಿರಲು ಪಿಂಗಳನು ಆಶ್ಚರ್ಯಗೊಂಡನು. ಮಾರೂ ಅಷ್ಟಕ್ಕೇ ಸುಮ್ಮನಿರಲಿಲ್ಲ. ಕೆಲವು ಜನ ಭಟ್ಟಂಗಿಗಳೊಂದಿಗೆ ತನ್ನ ಸಂದೇಶ ಢೋಲನಿಗೆ ಕಳುಹಿಸಿದಳು. ಅವರು ನಲವೀರಘಡಕ್ಕೆ ಹೋಗಿ ಢೋಲನನ್ನು ಭೇಟಿಮಾಡಿದರು.

ನಿಜಸಂಗತಿ ಬಯಲಾದಕೂಡಲೇ, ತಕ್ಷಣ ಪುಂಗಳಕ್ಕೆ ಹೋಗಲು ಸಿದ್ಧನಾದ ಢೋಲ. "ಅಲ್ಲಿಗೆ ಹೋಗಬೇಡಿ" ಎಂದು ಮಾಳವಣಿ ಗಂಡನನ್ನು ಕೇಳಿಕೊಂಡಳು. ಢೋಲ ಕೇಳಲಿಲ್ಲ. ಆಗವಳು ಢೋಲನು ಹತ್ತುವ ಒಂಟೆಯ ಹತ್ತಿರಕ್ಕೆ ಹೋಗಿ "ಒಂಟೆಯೇ,



ಒಂಟೆಯೇ, ಕುಂಟುತನದ ನೆಪ ಹೇಳಿ, ನನ್ನ ಮೇಲೆ ಕನಿಕರತೋರಿಸಮ್ಮಾ" ಎಂದು ಕೇಳಿಕೊಂಡಳು. ಆದರೂ ಪಾಪ! ಆಕೆಯ ಕೋರಿಕೆ ಫಲಿಸಲಿಲ್ಲ.

ಮತ್ತೆ ಗಂಡನ ಹತ್ತಿರಬಂದು "ನಾನು ಎಚ್ಚರುದಿಂದಿರುವಾಗ ಹೋಗುವುದಿಲ್ಲವೆಂದು ಮಾತು ಕೊಡಿ" ಎಂದು ದೈನ್ಯದಿಂದ ಕೇಳಿಕೊಂಡಳು ಮಾಳವಣಿ. ಢೋಲ ಈ ಮಾತಿಗೆ ಒಪ್ಪಿಕೊಂಡ.

ಗಂಡ ಎಲ್ಲಿ ತನ್ನನ್ನು ಬಿಟ್ಟು ಹೊರಟುಬಿಡುವನೋ ಎಂಬ ಭಯದಿಂದ ನಿದ್ದೆ ಮಾಡುವುದನ್ನೇ ಬಿಟ್ಟು ಬಿಟ್ಟಳು. ಆದರೆ ಎಷ್ಟು ದಿನವೆಂದು ನಿದ್ದೆಯಿಲ್ಲದೆ ಇರುವಳು? ಒಂದು ದಿನ ಆಕೆ ನಿದ್ರಾದೇವಿಯ ವಶ

ವಾದಳು. ಆ ಸಮಯ ನೋಡಿ ಢೋಲ ಹೊರಟುಬಿಟ್ಟನು. ಸ್ವಲ್ಪ ಸಮಯವಾದನಂತರ ಮಾಳವಣಿ ಎದ್ದಳು. ಢೋಲಾ ಹೊರಟ ವಿಷಯವರಿತು ಬಹಳ ವ್ಯಾಕುಲಗೊಂಡಳು.

ಹಿಂದಿರುಗಿ ಬರುವಂತೆ ತನ್ನ ಗಂಡನಿಗೆ ಗಿಣಿಯ ಮುಖಾಂತರ ಒಂದು ಸಂದೇಶ ಕಳುಹಿಸಿದಳು. ಗಿಣಿ ಹೋಗಿ ಢೋಲನಿಗೆ ಹೇಳಲು ಆತನು ಕುಪಿತಗೊಂಡು "ಚಿತಿಗೆ ಬೆಂಕಿಇಟ್ಟು ಅದರಲ್ಲಿ ಬಿದ್ದು ಸಾಯುವಂತೆ ಮಾಳವಣಿಗೆ ಹೇಳು" ಎಂದ.

ಢೋಲಾ ಪುಂಗಳ ಪಟ್ಟಣವನ್ನು ಸೇರುವ ಸಮಯಕ್ಕೆ ಸರಿಯಾಗಿ, ಬಿಂದಿಗೆಯನ್ನು ಸೊಂಟದಮೇಲಿಟ್ಟುಕೊಂಡು ನೀರಿಗೆ ಹೋಗುತ್ತಿದ್ದ ಮಾರೂ ಆತನ ಕಣ್ಣಿಗೆ ಬಿದ್ದಳು.

ಮಾತಿನ ಸಂದರ್ಭದಲ್ಲಿ ಒಬ್ಬರ ನ್ನೊಬ್ಬರು ಅರಿತುಕೊಂಡರು. ಇಬ್ಬರೂ ಒಟ್ಟಾಗಿ ಮನೆಗೆ ಹೋದರು. ಅವರನ್ನು ನೋಡಿ ತಂದೆತಾಯಿಗಳು ಬಹು ಸಂತೋಷಪಟ್ಟರು. ಮಾರೂ ತಾಯಿಯ ಹತ್ತಿರ ಹೋಗಿ "ಯಾರಿಗಾಗಿ ನಾನಿಷ್ಟುಕಾಲ ಕಾದಿದ್ದೆನೋ, ಆ ನನ್ನ ದೇವರು ಇಂದಿಗೆ ಪ್ರತ್ಯಕ್ಷವಾದರು. ಮನೆ ನಗುತ್ತಿದೆ. ಸ್ತಂಭಗಳು ನರ್ತಿಸುತ್ತಿವೆ. ಮಂಚ ಆನಂದದಿಂದ ಗಿರ್ರನೆ ತಿರುಗುತ್ತಿದೆ" ಎಂದಳು.

ಕೆಲವು ದಿನ ಹೀಗೇ ಸಂತೋಷದಿಂದ ಕಾಲ ಕಳೆದನಂತರ ಮಾರೂವನ್ನು ಸಂಗಡ ಕರೆದುಕೊಂಡು ಢೋಲಾ ತನ್ನ ದೇಶಕ್ಕೆ ಪ್ರಯಾಣ ಮಾಡಿದನು.

ಢೋಲಾ ಯುಕ್ತಿವಂತ. ಸಮಯಕ್ಕೆ ಸರಿ ಹೊಂದಿಕೊಂಡು ನಡೆಯುವ ಚಾತುರ್ಯವಿದೆ ಆತನಲ್ಲಿ. ತನ್ನ ರಾಜ್ಯವನ್ನು ಸೇರಿದ ಕೂಡಲೇ ತಂದೆತಾಯಿಗಳನ್ನು ಸಮಾಧಾನಪಡಿಸಿ, ಹೆಂಡತಿ ಮಾಳವಣಿಯನ್ನು ಪುಸಲಾಯಿಸಿ, ಎಲ್ಲರನ್ನೂ ಸಂತೋಷಗೊಳಿಸಿದನು. ಅಂದಿನಿಂದ ಮಾರೂ ಮತ್ತು ಮಾಳವಣಿಯರನ್ನೂ ಸಮಾನವಾಗಿ ನೋಡಿಕೊಳ್ಳುತ್ತಾ, ಅವರೊಂದಿಗೆ ಆನಂದದಿಂದ ಕಾಲಕಳೆಯುತಿದ್ದನು. ಮಾರೂ ಮತ್ತು ಮಾಳವಣಿಯರಲ್ಲಿ ಕೆಳೆತನ ಬೆಳೆದು ಸುಖವಾಗಿದ್ದರು.



# ಮಾಡಿನೋಡು



ದಪ್ಪವಾದ ರಟ್ಟಿನ ತುಂಡನ್ನು ತೆಗೆದುಕೊ. ಅದನ್ನು ೧ ನೆಯ ಚಿತ್ರದಲ್ಲಿ ತೋರಿಸಿದ್ದಂತೆ ಕತ್ತರಿಸು. ಅದರ ಒಂದು ಬದಿಯಲ್ಲಿ ಗಿಳಿಯ ಬೊಂಬೆಯನ್ನು ಬರೆ.

ರಟ್ಟಿನ ಎರಡನೇ ಬದಿಯಲ್ಲಿ ಪಂಜರದ ಬೊಂಬೆಯನ್ನು ತಲೆಕೆಳಗಾಗಿ ಬರೆ. (ಎರಡನೇ ಚಿತ್ರದಂತೆ) ತರುವಾಯ ರಟ್ಟಿನ ತುಂಡಿಗೆ ಚಿತ್ರದಲ್ಲಿ ತೋರಿಸಿದಂತೆ ಎರಡು ತೂತು ಮಾಡು. ಆ ತೂತಿನೊಳಗೆ ನೀಳವಾದ ದಾರದ ತುಂಡನ್ನು ೩ ನೇ ಚಿತ್ರದಲ್ಲಿರುವಂತೆ ತೂರಿಸು. ತರುವಾಯ ದಾರದ ಎರಡು ಕೊನೆಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ದಾರಕ್ಕೆ ಹುರಿಕೊಟ್ಟು ಬಿಟ್ಟುಬಿಡು.

ಈಗ ರಟ್ಟಿನ ತುಂಡು ಕೆಳಗಿನಿಂದ ಮೇಲಕ್ಕೆ ಗಿರಗಿರನೆ ತಿರುಗುತ್ತದೆ. ಪಂಜರದ ಬೊಂಬೆಯೂ ಗಿಳಿಯ ಬೊಂಬೆಯೂ ರಟ್ಟಿನ ಬೇರೆಬೇರೆ ಬದಿಗಳಲ್ಲಿದ್ದರೂ ರಟ್ಟಿನ ತುಂಡು ಗಿರಗಿರ ತಿರುಗುವಾಗ ಎರಡು ಬೊಂಬೆಗಳೂ ಒಂದೇ ಬದಿಯಲ್ಲಿರುವಂತೆಕಾಣಿಸಿ ಪಂಜರದಲ್ಲಿ ಗಿಳಿ ಇರುವ ಹಾಗೆ ತೋರುತ್ತೆ. (ನಾಲ್ಕನೇ ಚಿತ್ರದಂತೆ)





# ಸೇರಿಗೆ ಸವಾಸೇರು

ನಂಜನಗೂಡಿನಲ್ಲಿ ನಾಗರಾಜಯ್ಯ ಎಂಬ ಒಬ್ಬ ಗೃಹಸ್ಥ. ಆತನಿಗೆ ಆದಿರಾಜಯ್ಯ, ನಾಭಿರಾಜಯ್ಯ ಎಂತ ಇಬ್ಬರು ಸ್ನೇಹಿತರು.

ನಾಗರಾಜಯ್ಯ ಹಣಗಾರ. ಈ ವಿಷಯ ತಿಳಿದೇ ಆದಿರಾಜಯ್ಯ, ನಾಭಿರಾಜಯ್ಯರು ಆತನೊಂದಿಗೆ ಸ್ನೇಹ ಬೆಳೆಸಿದರು. "ನಿಮ್ಮ ಹಣ ಪೆಟ್ಟಿಗೆಯಲ್ಲಿ ಬಚ್ಚಿಟ್ಟರೆ ಏನು ಲಾಭ? ಅದನ್ನು ಬಂಡವಾಳವಾಗಿಟ್ಟುಕೊಂಡು ವ್ಯಾಪಾರಮಾಡಿದರೆ ರೂಪಾಯಿಗೆ ಹತ್ತರಷ್ಟು ಲಾಭ ಸಂಪಾದಿಸಬಹುದು" ಎಂದು ಸಲಹೆ ಕೊಟ್ಟರು. "ನನಗೆ ವ್ಯಾಪಾರಮಾಡಲು ಬಾರದು" ಎಂದ ನಾಗರಾಜಯ್ಯ. "ನೀವು ಬಂಡವಾಳಹಾಕಿ. ವ್ಯಾಪಾರವನ್ನೆಲ್ಲಾ ನಾವು ನೋಡಿಕೊಳ್ಳುತ್ತೇವೆ" ಎಂದು ದುಂಬಾಲು ಬಿದ್ದರು ಆ ಸ್ನೇಹಿತರು.

ಸರಿ, ನಾಗರಾಜಯ್ಯನ ಹಣದಿಂದ ವ್ಯಾಪಾರ ಪ್ರಾರಂಭವಾಯಿತು. ಸ್ನೇಹಿತರಿಬ್ಬರನ್ನೂ ನಂಬಿ ಆತನು ಎಲ್ಲಾ ಅವರ ಮೇಲೆ ಬಿಟ್ಟುಬಿಟ್ಟ. ಅವರು ಅಸಲು ಮತ್ತು ಲಾಭವನ್ನು ಅಪಹರಿಸಿ, ವ್ಯಾಪಾರದಲ್ಲಿ ತುಂಬಾ ನಷ್ಟವಾಯಿತೆಂದು ಹೇಳಿಬಿಟ್ಟರು.

ತನ್ನ ಹಣವನ್ನು ಅಪಹರಿಸಿ, ತಲಾ ಐದೈದು ಸಾವಿರ ರೂಪಾಯಗಳನ್ನು ಬ್ಯಾಂಕಿನಲ್ಲಿ ಹಾಕಿರುವರೆಂಬ ವಿಷಯ ನಾಗರಾಜಯ್ಯನಿಗೆ ತದನಂತರ ತಿಳಿಯಿತು. ತಿಳಿದೂಸಹ ಆತನು ಅವರನ್ನು ಒಂದು ಮಾತಾಡಲಿಲ್ಲ. ಎಂದಿನಂತೆಯೇ ಸ್ನೇಹಭಾವದಿಂದಲೇ ಇದ್ದ.

ಕೆಲಕಾಲಾನಂತರ ಆತನು ಕಾಯಿಲೆಯಿಂದ ಹಾಸಿಗೆ ಹಿಡಿದ. ಇನ್ನು ಬಹಳ ದಿನ ಬದುಕುವುದಿಲ್ಲವೆಂದು ಅರಿತು, ಆತನು ಒಂದು ದಿನ ಆದಿರಾಜಯ್ಯನನ್ನು ಮನೆಗೆ ಬರಮಾಡಿಕೊಂಡು "ಆದಿರಾಜಯ್ಯ, ನೀನು ನನಗೊಂದು ಉಪಕಾರಮಾಡಬೇಕಪ್ಪಾ" ಎಂದ. "ಏನದು?" ಎಂದು ಕೇಳಿದ ಆದಿರಾಜಯ್ಯ. "ಏನಿಲ್ಲ. ನನ್ನ ಕಾಲ ಮುಗಿಯಿತು. ನಾನು ಹೋಗುವಮುನ್ನ ನನ್ನ ಆಸ್ತಿಪಾಸ್ತಿಯ ವಿಷಯವನ್ನೆಲ್ಲಾ ನನ್ನ ಹೆಂಡತಿಗೆ ಹೇಳಬೇಕಾಗಿದೆ. ಆದರೆ ನಮ್ಮಾಕೆ ಬಹಳ

ಡಿ. ಮನೋಹರಹಂದ, ಹುಬ್ಬಳ್ಳಿ




ದುಂದುಗಾತಿ, ಹಣ ಕೈಗೆಕೊಟ್ಟರೆ ಮೂರು ನಿಮಿಷಗಳಲ್ಲಿ ಖರ್ಚು ಮಾಡುತ್ತಾಳೆ'' ಎಂದ.

ಆತನ ಹತ್ತಿರ ಇನ್ನೂ ಹಣ ವಿರುವ ವಿಷಯಕೇಳಿ ಆದಿರಾಜಯ್ಯನ ಬಾಯಲ್ಲಿ ನೀರೂರಿತು. 'ಇಷ್ಟು ದಿನ ಹೇಳಲೇ ಇಲ್ಲವಲ್ಲಾ ಈ ಆಸಾಮಿ' ಎಂದು ಮನದಲ್ಲಿ ಅಂದುಕೊಂಡು "ನಿಜ, ನಿಜ, ಹೆಂಗಸಿನ ಕೈಯಲ್ಲಿ ಹಣ, ಗಂಡಸಿನ ಕೈಯಲ್ಲಿ ಮಗು ಉಳಿಯದು ಎಂದು ಹಿರಿಯರು ಹೇಳಿರುತ್ತಾರಲ್ಲವೇ ?'' ಎಂದ.

"ವ್ಯಾಪಾರದಲ್ಲಿ ನಷ್ಟವಾದದ್ದು ಹೋಗಿ ನನ್ನ ಹತ್ತಿರ ಇನ್ನೂ ಹದಿನಾರು ಸಾವಿರ ರೂಪಾಯಿಗಳಿವೆ. ಆ ರೂಪಾಯಿಗಳನ್ನು ಒಂದೊಂದು ಸಾವಿರದಂತೆ ಮಡಿಕೆಗಳಲ್ಲಿ



ಸುರಿದು, ನಮ್ಮ ಮನೆಯ ನಾಲ್ಕು ಕೋಣೆಗಳ ಒಂದೊಂದು ಮೂಲೆಯಲ್ಲಿ ಒಂದೊಂದು ಮಡಿಕೆಯನ್ನು ಹೂತು ಬಚ್ಚಿಟ್ಟಿರುವೆನು. ಇಂತಹ ಹದಿನಾರು ಮಡಿಕೆಗಳಿರುವುದೆಂದು ನನ್ನ ಹೆಂಡತಿಗೆ ಒಂದೇಸಾರಿ ತಿಳಿಸಬಾರದು. ನೀನು ಮಾಡಬೇಕಾದ ಉಪಾಯವೇನೆಂದರೆ ...'' ಎಂದು ಹೇಳಿ ಅಷ್ಟಕ್ಕೇ ಮಾತು ನಿಲ್ಲಿಸಿದ.

"ಹೇಳಿ, ಹೇಳಿ'' ಎಂದು ಅವಸರಪಡಿಸಿದ ಆದಿರಾಜಯ್ಯ.

"ಆಗಾಗ ನಮ್ಮ ಮನೆ ಪರಿಸ್ಥಿತಿ ತೀರದುಕೊಂಡು ಹೋಗುತ್ತಾ ಇರು. ನಮ್ಮಾಕೆ ಹಣವಿಲ್ಲದೆ ತೊಂದರೆಪಡುತ್ತಿರುವುದು ತಿಳಿದಾಗ ಒಂದು ಮಡಿಕೆಮಾತು ತಿಳಿಸಿ ಆ ಹಣ ಅಗೆದು ತೆಗೆದುಕೊಳ್ಳುವಂತೆ ಹೇಳು. ಆ ಹಣ ಪೂರ್ತಿಯಾಗುವ ವರೆವಿಗೂ ಅವಳಿಗೆ ಇತರ ಮಡಿಕೆಗಳ ವಿಷಯ ತಿಳಿಸಬಾರದು ; ಬೇರೆ ಯಾರಿಗೂ ಹೇಳಬಾರದು. ನಾಭಿರಾಜಯ್ಯನಿಗೂ ಹೇಳಬೇಡ'' ಎಂದು ನಾಗರಾಜಯ್ಯ ಒತ್ತಿಹೇಳಿದ.

"ಅಗತ್ಯವಾಗಿ ಹಾಗೇ ಮಾಡುತ್ತೇನೆ. ನೀವು ನಿಶ್ಚಿಂತೆಯಾಗಿರಿ'' ಎಂದು ಭರವಸೆ ಕೊಟ್ಟು ತೆರಳಿದ ಆದಿರಾಜಯ್ಯ.

ಅಂದು ಸಾಯಂಕಾಲವೇ ನಾಗರಾಜಯ್ಯ ತನ್ನ ಎರಡನೇ ಗೆಳೆಯ ನಾಭಿರಾಜಯ್ಯನನ್ನು ಬರಮಾಡಿಕೊಂಡು, ಆ ಮಡಿಕೆಗಳ ರಹಸ್ಯ ತಿಳಿಸಿ ಆದಿರಾಜಯ್ಯನನ್ನು ಕೇಳಿ







ಕೊಂಡಂತೆಯೇ 'ಈ ಉಪಕಾರ ನನಗಾಗಿ ನೀನು ಮಾಡಬೇಕು. ಈ ರಹಸ್ಯ ಆದಿಗೂ ಹೇಳಬೇಡ. ಅವನೆಂದರೆ ನನಗೆ ನಂಬಿಕೆಯಿಲ್ಲ" ಎಂದ. "ಅವನಿಗೆ ತಿಳಿಸುತ್ತೇನೆಯೋ ಈ ವಿಷಯ? ನೀವೇನೂ ಯೋಚಿಸಬೇಕಾಗಿಲ್ಲ. ನಾನು ನೋಡಿಕೊಳ್ಳುತ್ತೇನೆ" ಎಂದು ಅಭಯ ನೀಡಿದ ನಾಭಿರಾಜಯ್ಯ.

ಕೆಲದಿನಗಳಾದ ಮೇಲೆ ನಾಗರಾಜಯ್ಯನ ಹೆಂಡತಿ ನಾಗಮ್ಮ ಆದಿರಾಜಯ್ಯನೊಂದಿಗೆ "ಅವರು ಹೋದ ಮೇಲೆ ಹಣಕ್ಕೆ ತುಂಬಾ ಪೇಚಾಟವಾಗಿದೆ. ಒಂದಿಪ್ಪತ್ತೈದು ರೂಪಾಯಿ ಸಾಲ ಕೊಡಿ" ಎಂದು ಕೇಳಿದಳು.

"ನನ್ನಹತ್ತಿರ ಹಣವೆಲ್ಲಿದೆ? ಅಷ್ಟೇ ಅಲ್ಲ, ನೀವೀರೀತಿ ಸಾಲಸೋಲ ಎಷ್ಟುದಿನಾ ಅಂತ ಕಳೆಯುವಿರಿ? ನಿಮ್ಮ ಮನೆ ಮಾರಿಬಿಟ್ಟರೆ ಸಾವಿರ ರೂಪಾಯಿ ಸಿಗುತ್ತದೆ. ಹಾಗೆ ಮಾಡ ಕೂಡದೇಕೆ?" ಎಂದ ಆದಿರಾಜಯ್ಯ.

"ಅರೆರೆ, ನನಗೆ ಈ ಆಲೋಚನೆಯೇ ಹೊಳೆಯಲಿಲ್ಲ. ಮಾರುವ ಹಾಗಿದ್ದರೆ ನಾಳೆ ಹೇಳುತ್ತೇನೆ" ಎಂದಳಾಕೆ.

ಈ ವಿಷಯ ಹಾಗಿರಲು ಆ ಸಾಯಂಕಾಲ ಅವರ ಮನೆಗೆ ನಾಭಿರಾಜಯ್ಯ ಹೋದ. "ಆದಿರಾಜಯ್ಯನವರು ಮನೆ ಮಾರಿದರೆ ಸಾವಿರ ರೂಪಾಯಿ ಬರುತ್ತದೆ ಅಂತಾರೆ" ಎಂದು ಎಲ್ಲ ಸಂಗತಿಯನ್ನೂ ಆತನಿಗೆ ಹೇಳಿದಳು. ಅದಕ್ಕೆ ನಾಭಿರಾಜಯ್ಯ "ಸಾವಿರವೇನು? ನಾನು ಸಾವಿರದೈನೂರು ರೂಪಾಯಿ




ಕೊಡುತ್ತೇನೆ" ಎಂದ. ಅವಳಿಗೆ ಸಂತೋಷವೆನಿಸಿತು. ಮಾರನೆಯದಿನ ಬೆಳಿಗ್ಗೆ ಮತ್ತೆ ಬಂದ ಆದಿರಾಜಯ್ಯನಿಗೆ ನಾಗಮ್ಮ ನಾಭಿರಾಜಯ್ಯನ ವಿಷಯ ಹೇಳಿದಳು. "ನಾನು ಎರಡು ಸಾವಿರ ಕೊಡ್ತೇನೆ" ಎಂದ ಆದಿರಾಜಯ್ಯ. ಹದಿನಾರು ಸಾವಿರ ರೂಪಾಯಿ ತುಂಬಿರುವ ಮಡಿಕೆಗಳಿರುವ ಮನೆಯನ್ನು ಎರಡು ಸಾವಿರ ರೂಪಾಯಿಗಳಿಗೆ ಕೊಂಡುಕೊಂಡರೆ ನಷ್ಟವೇನಿದೆ? ಮಾಮೂಲಿನಂತೆ ಆ ಸಾಯಂಕಾಲ ಬಂದ ನಾಭಿರಾಜಯ್ಯ ಎರಡು ಸಾವಿರದೈನೂರು ರೂಪಾಯಿ ಕೊಡುವೆನೆಂದ.

ಈ ರೀತಿ ದಿನದಿನಕ್ಕೆ ಅವರಿಬ್ಬರ ನಡುವೆ ಪೈಪೋಟಿ ಹೆಚ್ಚಿತು. ಕೊನೆಗೆ ಆದಿರಾಜಯ್ಯ ಹತ್ತು ಸಾವಿರ ಕೊಡವೆನೆಂದ. ಹದಿನಾರು

ಸಾವಿರದಲ್ಲಿ ಹತ್ತುಸಾವಿರ ಕಳೆದರೆ ಇನ್ನೂ ಆರುಸಾವಿರ ಲಾಭ ಬರುತ್ತದಷ್ಟೆ!

ನಾಗಮ್ಮ ತಿಳಿಗೇಡಿಯಲ್ಲ. ನಾಭಿರಾಜಯ್ಯ ಬೆಲೆ ಹೆಚ್ಚು ಮಾಡುವನೇನೋ ಎಂದು ಇನ್ನೂ ತಾಳಿ ನೋಡಿದಳು.

ಆದರೆ ಆತನು ಧರ ಏರಿಸಲಿಲ್ಲ. ಹೀಗಾ ಅವನು ಆದಿರಾಜಯ್ಯನನ್ನು ಭೇಟಿಮಾಡಿ "ಲೋ, ಆ ಮನೆಗೆ ಹತ್ತುಸಾವಿರ ಕೊಡುವೆನೆಂದು ಹೇಳಿದೆಯಂತೆ. ಏನಿದೆ ಅಂತ ಕೊಡ್ತಿಯೋ" ಎಂದು ಮೂದಲಿಸಿದ.

"ಆಹಾಹಾ, ನೀನೇನು ಬಾಚಿಕೊಳ್ಳೋಣವೆಂದು ಧರ ಏರಿಸಿದೆ?" ಎಂದು ಅವಹೇಳನ ಮಾಡಿದ ಆದಿರಾಜಯ್ಯ.

ಅವರು ಒಬ್ಬರನ್ನೊಬ್ಬರು ನೋಡಿಕೊಂಡು ನಸುನಕ್ಕರು. ಈ ರಹಸ್ಯವು ಅವನಿಗೆ ಹೇಗೆ ತಿಳಿಯಿತೆಂದು ಇವನೂ, ಇವನಿಗೆ ಹೇಗೆ ತಿಳಿಯಿತೆಂದು ಅವನೂ ಗ್ರಹಿಸದಾದರು. ಕೊನೆಗೆ ನಾಭಿರಾಜಯ್ಯ "ಹತ್ತುಸಾವಿರ ಎಲ್ಲಿಂದ ತರುತ್ತೀಯೇ? ಬ್ಯಾಂಕಿನಲ್ಲಿ ಐದು ಸಾವಿರತಾನೇ ಇದೆ?" ಎಂದ.

"ನಿನಗೂ ಐದುಸಾವಿರ ಇದೆಯಲ್ಲಾ. ಆ ಹಣ ನನಗೆ ಸಾಲ ಕೊಡು. ಒಂದು ವಾರದಲ್ಲಿ ಕೊಟ್ಟುಬಿಡ್ತೇನೆ" ಎಂದ ಆದಿರಾಜಯ್ಯ.

"ಅದೇನೂ ನಡೆಯದು. ನಮ್ಮಿಬ್ಬರ ಹತ್ತಿರವಿರುವ ಹಣ ಹಾಕಿ ಆ ಮನೆ ನಮ್ಮಿಬ್ಬರ ಹೆಸರಿನಲ್ಲಿ ಬರೆಯಿಸಿಕೊಳ್ಳುವ!" ಎಂದ ನಾಭಿರಾಜಯ್ಯ. ಆದಿರಾಜಯ್ಯ ಒಪ್ಪಿದ.

ಹಿಂದೆ ನಾಗರಾಜಯ್ಯನಿಗೆ ದ್ರೋಹಮಾಡಿ ಸಂಪಾದಿಸಿದ ಹತ್ತುಸಾವಿರ ರೂಪಾಯಿಗಳನ್ನು ತಂದು ಅವರಿಬ್ಬರೂ ನಾಗಮ್ಮನಿಗೆ ಕೊಟ್ಟು, ಆ ಮನೆಯನ್ನು ತಮ್ಮ ಹೆಸರಿಗೆ ಬರೆಯಿಸಿಕೊಂಡರು.

ತರುವಾಯ ಅವರಿಬ್ಬರೂ ಸೇರಿ ತಲಾ ಒಂದೊಂದು ಹಾರೆ ತೆಗೆದುಕೊಂಡು ಕೋಣೆಯ ಮೂಲೆಗಳಲ್ಲಿ ಅಗೆಯಲು ಪ್ರಾರಂಭಿಸಿದರು! ಎಷ್ಟು ಅಗೆದರೂ ಮಡಿಕೆ ಕಾಣಿಸಿದರಷ್ಟೇ!!

ಅಗೆದು ಅಗೆದು ಸಾಕು ಸಾಕಾಯಿತು. ಬಿಂದಿಗೆ ಬಿಂದಿಗೆಯಾಗಿ ಬೆವರಿಳಿದುದೇ ಆ ಮೋಸಗಾರರಿಗಾದ ಲಾಭ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಮೇ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮಾರ್ಚಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು–26.

---

### ಏಪ್ರಿಲ್ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಮುಟ್ಟಬೇಡ!

ಎರಡನೇ ಫೋಟೋ : ಮೆಟ್ಟಬೇಡ!

ಕಳಿಸಿದವರು : ಯಚ್. ಚಂದ್ರಶೇಖರ ರಾವ್,
16. ವೀರಾಸ್ವಾಮಿಪಿಳ್ಳೆ ಸ್ಟ್ರೀಟ್, ಮದ್ರಾಸು-8

ಬಹುಮತಿ ರೂ. 10/– ನ್ನು ಏಪ್ರಿಲ್ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

Printed by B. NAGI REDDI at the B N. K. Press Ltd., Madras 26, and Published by him for Chandamama Publications, Madras 26, Controlling Editor : SRI 'CHAKRAPANI'

Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ಆತ್ಮೋನ್ನತಿ ಸಾಧನ

ಕಳಿಸಿದವರು:
ಎಚ್. ಎಸ್. ಶ್ರೀನಿವಾಸ ಶೆಟ್ಟಿ

